# ಶಿಕ್ಷಣ, ಮಾರುಕಟ್ಟೆಯ ಬೆಳವಣಿಗೆ ಮತ್ತು ಸಾಮಾಜಿಕ ಸಂಘರ್ಷ

**ಅಮನ್ ಮದಾನ್**

ಭಾಗ-1

ಭಾರತದ ಶಿಕ್ಷಣವನ್ನು ಹಲವಾರು ಮೂಲಭೂತವಾದ ಸಮಾಜಶಾಸ್ತ್ರೀಯ ಪ್ರಕ್ರಿಯೆಗಳು ಪ್ರಭಾವಿಸಿವೆ. ಈ ಅಧ್ಯಾಯದಲ್ಲಿ ನಾವು ಮಾರುಕಟ್ಟೆಗಳ ಬೆಳವಣಿಗೆ ಮತ್ತು ಖರೀದಿ ಹಾಗೂ ಮಾರಾಟದ ಸಂಬಂಧದ ಮೂಲಕ ಸರಕು ಮತ್ತು ಸೇವೆಗಳ ವಿನಿಮಯ ಹೇಗೆ ನಡೆಯುತ್ತದೆ ಎನ್ನುವುದರ ಮೇಲೆ ಗಮನ ಹರಿಸಲಿದ್ದೇವೆ. ಇದು ಕೇವಲ ಆರ್ಥಿಕ ಬದಲಾವಣೆಯಷ್ಟೆ ಅಲ್ಲ, ಬದಲಿಗೆ ಇದು ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿವರ್ತನೆಯೂ ಆಗಿದೆ. ಹಣವ್ಯವಹಾರವಿಲ್ಲದೆ, ಇನ್ನಿತರ ಅಂಶಗಳೇ ಮುಖ್ಯವಾಗಿದ್ದ ಹಲವು ಸಂಬಂಧಗಳಲ್ಲಿ ಈಗ ಹಣ ಮತ್ತು ಅದರ ವಿನಿಯಮವೇ ಬಹುಮುಖ್ಯ ಅಂಶಗಳಾಗಿ ಹೊರಹೊಮ್ಮಿ ಆ ಸಂಬಂಧಗಳಲ್ಲಿ ಆಗುತ್ತಿರುವ ಪಲ್ಲಟಗಳನ್ನು ನಾವು ನೋಡುತ್ತಿದ್ದೇವೆ. ಇದರೊಂದಿಗೆ ನಾವು ಬೋಧನೆ ಮತ್ತು ಕಲಿಕೆಯ ನಿತ್ಯದ ಅನುಭವದಲ್ಲಿ ಆಗುತ್ತಿರುವ ಬದಲಾವಣೆಗಳನ್ನೂ ಹಾಗೂ ಶಿಕ್ಷಣದ ಪಠ್ಯ ಮತ್ತು ಅದರ ಉದ್ದೇಶಗಳಲ್ಲಿ ಇವನ್ನೆಲ್ಲ ಹೇಗೆ ಮಾರ್ಪಾಡು ಮಾಡಲಾಗುತ್ತಿದೆ ಎನ್ನುವುದನ್ನು ನೋಡಬಹುದು. ಈ ಪಲ್ಲಟಗಳ ಗುಣಲಕ್ಷಣಗಳು ಮತ್ತು ಇದು ಹುಟ್ಟುಹಾಕಿರುವ ಕೆಲವು ಪ್ರಶ್ನೆಗಳ ಪರಿಶೀಲನೆ ತುಂಬಾ ಮುಖ್ಯವಾದ ಕೆಲಸವಾಗಿದೆ. ಶಿಕ್ಷಣದ ಖಾಸಗೀಕರಣವು ಇತ್ತೀಚಿನ ದಿನಗಳಲ್ಲಿ ಬಹುಚರ್ಚಿತ ಮತ್ತು ವಿವಾದಾಸ್ಪದ ವಿಷಯವಾಗಿದೆ. ಈ ಕುರಿತು ಮಾತನಾಡುತ್ತಿರುವ ಸಮಾಜಶಾಸ್ತ್ರಜ್ಞರು, ``ಇದು ಕೇವಲ ಶಿಕ್ಷಣ ಕ್ಷೇತ್ರದಲ್ಲಿ ಮಾತ್ರ ಆಗುತ್ತಿರುವ ಮೇಲುನೋಟದ ಹೊಂದಾಣಿಕೆಯಲ್ಲ. ಬದಲಿಗೆ, ಇದು ಭಾರತೀಯ ಸಮಾಜದಲ್ಲಿ ಆಗುತ್ತಿರುವ ಬಹುದೊಡ್ಡ ಪರಿವರ್ತನೆಯ ಒಂದು ಭಾಗ,'' ಎನ್ನುತ್ತಿದ್ದಾರೆ. ಈ ವಿಷಯದಲ್ಲಿ ನಾವು ಯಾವ ದಿಕ್ಕಿನಲ್ಲಿ ಮುಂದಡಿ ಇಡುತ್ತೇವೆ ಎನ್ನುವುದು ಹಲವು ಪರಿಣಾಮಗಳನ್ನು ಬೀರುವಂಥ ಸಂಗತಿಯಾಗಿದೆ.

## ವಿನಿಮಯ ಮತ್ತು ಸಂಬಂಧಗಳು

ಇವೆಲ್ಲವುಗಳ ಕೇಂದ್ರ ಭಾಗದಲ್ಲಿ ಒಂದು ಬಗೆಯ ಸಂಬಂಧಗಳಿದ್ದು, ನಾವು ವಿನಿಮಯಗಳ ರೂಪದಲ್ಲಿ ಇದನ್ನು ವ್ಯಕ್ತಪಡಿಸುತ್ತೇವೆ. ಇದಕ್ಕೆ ಉದಾಹರಣೆಯಾಗಿ ನಾವು ಕೃಷಿ ಕಾರ್ಮಿಕರು ಮತ್ತು ಕುಶಲಕರ್ಮಿಗಳನ್ನು ನೋಡಬಹುದು. ಇವರಿಬ್ಬರೂ ಕೆಲವರ್ಷಗಳ ಹಿಂದಿನವರೆಗೂ ದುಡ್ಡಿಗಾಗಿ ಕೆಲಸ ಮಾಡುತ್ತಿರಲಿಲ್ಲ. ಬದಲಿಗೆ, ಇವರು ಜಮೀನಿನ ಒಡೆಯರಿಂದ ವರ್ಷಕ್ಕೆ ಇಂತಿಷ್ಟು ಎಂದು ಗೊತ್ತುಪಡಿಸಿದ ದವಸ-ಧಾನ್ಯಗಳನ್ನು ತೆಗೆದುಕೊಳ್ಳುತ್ತಿದ್ದರು. ಇವರನ್ನು ಸಾಮಾನ್ಯವಾಗಿ ಜಮೀನಿನ ಒಡೆತನವುಳ್ಳವರಿಗಿಂತ ಕೀಳಾಗಿ ಕಾಣಲಾಗುತ್ತಿತ್ತೆನ್ನುವುದು ನಿಜವಾದರೂ ಇವರು ತಮ್ಮ ಧಣಿಗಳ ಮನೆಗೆ ಹೋದಾಗ ಅಲ್ಲಿ ಇವರಿಗೆ ಊಟ ಕೊಡಲಾಗುತ್ತಿತ್ತು ಮತ್ತು ಇವರನ್ನು ಕೂಡ ಧಣಿಗಳ ಮನೆಯವರು ತಮ್ಮ ಮನೆಯ ಭಾಗವೆಂದೇ ಪರಿಗಣಿಸುತ್ತಿದ್ದರು. ಆದಾಗ್ಯೂ ರೈತಕಾರ್ಮಿಕರು/ಕುಶಲಕರ್ಮಿಗಳ ಶೋಷಣೆಯಂತೂ ಸಾಮಾನ್ಯ ವಿದ್ಯಮಾನವಾಗಿತ್ತು. ಅಷ್ಟೇ ಏಕೆ, ಇವರನ್ನು ಕೆಲವೊಮ್ಮೆ ಹೊಡೆದು-ಬಡಿದು ಮಾಡಲಾಗುತ್ತಿತ್ತು; ಇಲ್ಲವೇ ಲೈಂಗಿಕವಾಗಿಯೂ ದುರುಪಯೋಗಪಡಿಸಿಕೊಳ್ಳಲಾಗುತ್ತಿತ್ತು. ಇದು ಒಂದು ಮುಖವಾದರೆ, ಇನ್ನೊಂದು ಕಡೆಯಲ್ಲಿ ತಮ್ಮ ಧಣಿಗಳಿಗೆ ಹೀಗೆ ವಿಧೇಯರಾಗಿ ನಡೆದುಕೊಳ್ಳಬೇಕೆಂಬ ಸಾಂಸ್ಕೃತಿಕ ನಂಬಿಕೆ ಇತ್ತು. ಇದಕ್ಕೆ ಪ್ರತಿಯಾಗಿ ತಮ್ಮನ್ನು ಅವಲಂಬಿಸಿ ಸೇವಕರಾಗಿರುವ ಈ ಜನರ ಯೋಗಕ್ಷೇಮವನ್ನು

ನೋಡಿಕೊಳ್ಳಬೇಕಾದ ನೈತಿಕ ಮತ್ತು ಧಾರ್ಮಿಕ ಕರ್ತವ್ಯಗಳು ಜಮೀನಿನ ಒಡೆಯರಾದ ಧಣಿಗಳಿಗೆ/ಭೂಮಾಲೀಕರಿಗೆ ಇತ್ತು. ದೊಡ್ಡ ಹಿಡುವಳಿದಾರರು ಮತ್ತು ವ್ಯಾಪಾರಿಗಳು ಪಡೆದಿದ್ದ ಶಿಕ್ಷಣವು ಅವರಿಗೆ ಇನ್ನಿತರ ಸಂಗತಿಗಳೊಂದಿಗೆ ತಮ್ಮ ಕೆಲಸಗಾರರೊಂದಿಗೆ ಯಾವ ಬಗೆಯ ಬಾಂಧವ್ಯವನ್ನು ಹೊಂದಿರಬೇಕೆಂಬುದನ್ನೂ ಕಲಿಸಿತ್ತು. ಇದು ಜನರು ಬಯಸುವ ಅನೇಕ ಸಂಗತಿಗಳನ್ನು ಸೃಷ್ಟಿಸುವ ಒಂದು ನಿರ್ದಿಷ್ಟ ಹಾದಿಯನ್ನು ಹುಟ್ಟುಹಾಕಿತು. ಹೀಗಾಗಿ ಇದು ಒಂದು ಬಗೆಯಲ್ಲಿ **ಉತ್ಪಾದನಾ ಸಂಬಂಧ**ವಾಗಿತ್ತು.

ನಮ್ಮಲ್ಲಿ ಹಿಂದೆ ಕೆಲಸವು ಯಾವಾಗಲೂ ವೈಯಕ್ತಿಕ ಸಂಬಂಧಗಳ ಮೂಲಕ, ಒಂದು ಕುಟುಂಬಕ್ಕಾಗಿ ಅಥವಾ ಒಬ್ಬ ಯಜಮಾನನ ಮೂಲಕ ನಡೆಯುತ್ತಿತ್ತು. ಇಂತಹ ಕಡೆಗಳಲ್ಲಿ ಧಣಿಯಾದವನು ತನ್ನ ಅಧೀನನಾಗಿರುವವನನ್ನು ಹೀನಾಮಾನವಾಗಿ ಬೈದು, ಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದರೂ ಒಂದು ಬಗೆಯ ಸಾಂಪ್ರದಾಯಿಕ ಸಂಬಂಧವಿರುತ್ತಿತ್ತು. ಆದರೆ, ಹೀಗೆ ಸಾಂಸ್ಕೃತಿಕ ಅರ್ಥಗಳ ಪರಿಧಿಯಲ್ಲಿ ಸೃಷ್ಟಿಯಾಗುತ್ತಿದ್ದ ಇಂತಹ **ಉತ್ಪಾದನಾ ಸಂಬಂಧಗಳು** ಈಗ ಉಳಿದುಕೊಂಡಿಲ್ಲ. ತೀವ್ರವಾದ ಪಲ್ಲಟಕ್ಕೆ ಒಳಗಾಗಿರುವ ಈ ಸಂಬಂಧಗಳಲ್ಲಿ ಈಗ ಹಣದ ರೂಪದಲ್ಲಿ ಕೂಲಿಯನ್ನು ಕೊಡುವುದೇ ಪ್ರಧಾನವಾದ ಅಂಶವಾಗಿದೆ. ಹಾಗೆ ನೋಡಿದರೆ, ಹಣದ ಕಲ್ಪನೆ ಶತಶತಮಾನಗಳಿಂದಲೂ ಅಸ್ತಿತ್ವದಲ್ಲಿದೆ. ಆದರೆ, ಈಗ್ಗೆ ಒಂದೆರಡು ಶತಮಾನಗಳಿಂದ ವಿನಿಮಯ ಪ್ರಪಂಚದಲ್ಲಿ ಇದೇ ಅತ್ಯಂತ ಮುಖ್ಯವಾದ ಮಾಧ್ಯಮವಾಗಿದೆ. ಕೃಷಿ ಕ್ಷೇತ್ರದಲ್ಲಂತೂ ಇಂದು ಹೆಚ್ಚಿನ ರೈತ ಕಾರ್ಮಿಕರಿಗೆ ಹಣದ ರೂಪದಲ್ಲೇ ದಿನಗೂಲಿಯನ್ನು ನೀಡಲಾಗುತ್ತಿದ್ದು, ಇದರ ಮೇಲೆ ರೈತಕಾರ್ಮಿಕ ಮತ್ತು ಅವನ ಭೂಮಾಲೀಕನ ಸಂಬಂಧವು ಕೇಂದ್ರೀಕೃತವಾಗಿದೆ.

ಸರಕು ಮತ್ತು ಸೇವೆಗಳನ್ನು ಹೇಗೆ ವಿನಿಮಯ ಮಾಡಿಕೊಳ್ಳಲಾಗುತ್ತದೆ ಮತ್ತು ಇವುಗಳನ್ನು ಹೇಗೆ ಬಳಸಲಾಗುತ್ತದೆ ಎನ್ನುವುದು ಭಾರೀ ಬದಲಾವಣೆಗಳನ್ನು ಕಂಡಿದೆ. ಜಗತ್ತಿನ ಹಲವು ಸಮಾಜಗಳಲ್ಲಿ ಆಹಾರ ಮತ್ತು ಬೋಧನೆಯಂಥ ಸರಕು ಹಾಗೂ ಸೇವೆಗಳನ್ನು ಮುಖ್ಯವಾಗಿ ಮೂರು ಪ್ರಾಥಮಿಕ ರೂಪಗಳಲ್ಲಿ ವಿನಿಮಯ ಮಾಡಿಕೊಳ್ಳಲಾಗುತ್ತದೆ ಎಂದು ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಹೇಳುವಾಗ ಅವರು, ತಮ್ಮ ಈ ಪ್ರತಿಪಾದನೆಯಲ್ಲಿ ಸಾಮಾನ್ಯವಾಗಿ ಯಾವಾಗಲೂ ಕಾರ್ಲ್ ಪೋಲಾನ್ಯಿಯನ್ನು ಉಲ್ಲೇಖಿಸುತ್ತಾರೆ. ಇವರು ಹೇಳುವ ಈ ವಿನಿಮಯದ ಮೂರು ರೂಪಗಳೆಂದರೆ- **ಪರಸ್ಪರ ಕೊಡುಕೊಳ್ಳುವಿಕೆ (reciprocity), ಮರುಹಂಚಿಕೆ** (redistribution) ಮತ್ತು ಒಂದು ವಸ್ತುವನ್ನು **ಸರಕಿನಂತೆ ನೋಡುವ ಕ್ರಮ (commodification.)**. ಇದರಲ್ಲಿ ಹಲವು ಬಗೆಗಳಿರಬಹುದು. ಆದರೆ, ಸದ್ಯಕ್ಕೆ ನಾವೀಗ ಈ ರೂಪಗಳ ಬಗ್ಗೆ ಸರಳವಾಗಿ ಚರ್ಚಿಸೋಣ. ಉತ್ಪನ್ನ ಮತ್ತು ಸೇವೆಗಳನ್ನು ನಾವು ಒಂದು **ಸರಕೆಂದು** ನೋಡತೊಡಗಿದರೆ ಅವುಗಳ ಮೌಲ್ಯವನ್ನು ನಾವು ಹಣದ ರೂಪದಲ್ಲಿ ಅಳೆಯತೊಡಗುತ್ತೇವೆ ಮತ್ತು ಅವುಗಳನ್ನು ಮಾರುಕಟ್ಟೆಯಲ್ಲಿ ಖರೀದಿಸುವುದನ್ನೂ, ಮಾರಾಟ ಮಾಡುವುದನ್ನೂ ಮಾಡತೊಡಗುತ್ತೇವೆ. ಸಾಮಾನ್ಯವಾಗಿ ಮಾರುಕಟ್ಟೆಗಳಲ್ಲಿ ಎಲ್ಲ ಸರಕುಗಳನ್ನೂ ಮುಕ್ತವಾಗಿ, ಬಹಿರಂಗವಾಗಿ ಪ್ರದರ್ಶಿಸಲಾಗುತ್ತದೆ; ಇದು ಸರಕುಗಳನ್ನು ಮಾರಾಟ ಮಾಡಲು/ ಖರೀದಿಸಲು ಜಮಾಯಿಸುವವರು ಚೌಕಾಶಿ ಮಾಡಿ, ತಮ್ಮ ವ್ಯವಹಾರವನ್ನು ಮುಗಿಸುವ ಒಂದು ಸ್ಥಳವಾಗಿದೆ. ಇಂದು ಮಾರುಕಟ್ಟೆಗಳಲ್ಲಿ ಹೆಚ್ಚಿನ ಸಂದರ್ಭಗಳಲ್ಲಿ ಹಣದ ಮೂಲಕವೇ ಸರಕುಗಳಿಗೆ ಬೆಲೆಯನ್ನು ಕಟ್ಟಲಾಗುತ್ತದೆ. ಆದರೆ, ವಿನಿಮಯ ಪದ್ಧತಿಯಲ್ಲಿ ಯಾವಾಗಲೂ ಇದು ಹೀಗೆಯೇ ನಡೆಯುವುದಿಲ್ಲ. ಏಕೆಂದರೆ, ಮಾರುಕಟ್ಟೆಯು ಸರಕುಗಳ ಪೂರೈಕೆ ಮತ್ತು ಅವುಗಳಿಗಿರುವ ಬೇಡಿಕೆಯಿಂದ ಪ್ರಭಾವಿತವಾಗಿರುತ್ತದೆ. ಅಂದಂತೆ, ಮಾರುಕಟ್ಟೆಯು ಬೋಧನೆಯಂಥವು ಹೊಂದಿರುವ ಮೌಲ್ಯಕ್ಕೆ ಸಂಬಂಧಿಸಿದಂತೆ ಬಹುಮುಖ್ಯ ಪರಿಣಾಮವನ್ನು ಬೀರುತ್ತವೆ. ಏಕೆಂದರೆ, ಒಂದು ಸಮಾಜದಲ್ಲಿ ಎಷ್ಟು ಮಂದಿ ಶಿಕ್ಷಕರಿದ್ದಾರೆ ಮತ್ತು ಅವರಿಗೆ ಇರುವ ಬೇಡಿಕೆ ಎಷ್ಟು ಎನ್ನುವುದರ ಮೇಲೆ ಅಲ್ಲಿ ಹಣವನ್ನು ಪಾವತಿಸಲಾಗುತ್ತದೆ. ಅವರಿಗೆ ವೇತನವನ್ನು ಕೊಡಲಾಗುತ್ತದೆ.

ಬಹುಮುಖ್ಯವಾಗಿ ಹೇಳಬೇಕೆಂದರೆ, ಶಿಕ್ಷಕರ ಸಂಖ್ಯೆ ಮತ್ತು ಅವರಿಗೆ ಕೊಡುವ ಹಣವನ್ನು ನಿರ್ಧರಿಸುವುದಕ್ಕೆ ತುಂಬಾ ಒತ್ತು ಕೊಡಲಾಗುತ್ತದೆ.

ಆದರೆ, `**ಪರಸ್ಪರ ಕೊಡುಕೊಳ್ಳುವಿಕೆ'**ಯ ವಿನಿಮಯ ವಿಧಾನದಲ್ಲಿ ಯಾವುದೇ ವಸ್ತುವಿನ/ಸಂಗತಿಯ ಬೆಲೆಯನ್ನು ಹಣದಿಂದ ಕಟ್ಟುವುದಿಲ್ಲ. ಅಲ್ಲದೆ, ಒಂದು ವಿಚಾರಕ್ಕೆ/ವಸ್ತುವಿಗೆ ಸಂಬಂಧಿಸಿದಂತೆ ನಾವು ಏನನ್ನು ಕೊಡಬಹುದು ಎನ್ನುವುದನ್ನು ಕುರಿತು ಇಲ್ಲಿ ಬಹಿರಂಗವಾದ ಚೌಕಾಶಿಯೂ ನಡೆಯುವುದಿಲ್ಲ. ಬದಲಿಗೆ, ಇಲ್ಲಿ ಕೆಲವು ನಿರ್ದಿಷ್ಟ ಬಗೆಯ ಸಂಬಂಧಗಳನ್ನು ಆಧರಿಸಿ ವಿನಿಮಯ ಮಾಡಿಕೊಳ್ಳುವುದಕ್ಕೆ ಪ್ರಾಮುಖ್ಯತೆ ಇರುತ್ತದೆ. ಉದಾಹರಣೆಗೆ ಹೇಳುವುದಾದರೆ, ಒಬ್ಬ ವ್ಯಕ್ತಿಯು ತುಂಬಾ ಸಜ್ಜನನಾಗಿರುತ್ತಾನೆ ಅಥವಾ ಹೆಣ್ಣುಮಗಳೊಬ್ಬಳು ಒಳ್ಳೆಯ ಸಹೋದರಿಯಾಗಿರುತ್ತಾಳೆ ಎಂದಿಟ್ಟುಕೊಳ್ಳೋಣ, ಹೀಗಿದ್ದಾಗ ಕೆಲವು ಸಭೆ-ಸಮಾರಂಭಗಳಲ್ಲಿ ಅವರ ಬಗ್ಗೆ ಗೌರವವಿರುವ ವ್ಯಕ್ತಿಯೊಬ್ಬರು ಕೆಲವು ಉಡುಗೊರೆಗಳನ್ನು ಕೊಡಬಹುದು. ಅಂದಂತೆ, ಒಬ್ಬ ವ್ಯಕ್ತಿಯ ಸೋದರಸಂಬಂಧಿಗೆ ಸೀರೆಯನ್ನು ಉಡುಗೊರೆಯಾಗಿ ಕೊಟ್ಟರೆ ಅದರ ಮೂಲಕ ಕೆಲವು ಸಂಬಂಧಗಳನ್ನು ಗಟ್ಟಿಗೊಳಿಸಿಕೊಳ್ಳುವ ಆಶಯವಿರುತ್ತದೆ (ಅಥವಾ ಕೆಲವೊಮ್ಮೆ ಇನ್ನಿತರ ಬಗೆಯ ಸಂಬಂಧಗಳನ್ನು ಆಡಿಕೊಳ್ಳುವ ಉದ್ದೇಶದಿಂದಲೂ ಇಂತಹ ಉಡುಗೊರೆಗಳನ್ನು ನೀಡಲಾಗುತ್ತದೆ). ಇದಕ್ಕೆ ಪ್ರತಿಯಾಗಿ ಅವರಿಗೂ ಸೀರೆಯೋ, ಸಲ್ವಾರ್ ಕಮೀಜ್‌ನಂಥ ಉಡುಗೆಯೋ ಉಡುಗೊರೆಯಾಗಿ ಸಿಕ್ಕಿರಬಹುದು. ಹೀಗೆ ಉಡುಗೊರೆಯಾಗಿ ಕೊಡುವ ವಸ್ತುಗಳ ಬೆಲೆ ಕೆಲವು ದೃಷ್ಟಿಯಿಂದ ಮುಖ್ಯವಾದರೂ ಸಾಮಾನ್ಯವಾಗಿ ಯಾರೊಬ್ಬರೂ ಇವುಗಳನ್ನು ಕೇವಲ ಹಣದ ದೃಷ್ಟಿಯಿಂದಲೇ ಅಳೆಯುವುದಿಲ್ಲ. ಬದಲಿಗೆ, ಇವು ಸಾಂಪ್ರದಾಯಿಕ ಮತ್ತು ಸಾಂಸ್ಕೃತಿಕ ಅರ್ಥವನ್ನುಳ್ಳ ಪರಸ್ಪರ ವಿನಿಮಯಗಳಾಗಿದ್ದು, ಕನಸು-ಮನಸಿನಲ್ಲೂ ಇವುಗಳನ್ನು ದುಡ್ಡಿನಿಂದ ತೂಗುವುದಿಲ್ಲ. ಈ ರೀತಿಯ ಪರಸ್ಪರ ವಿನಿಮಯವು ಕೇವಲ ಸಂಕೇತಗಳಷ್ಟೆ ಅಲ್ಲ, ಬದಲಿಗೆ ನಮ್ಮ ಬದುಕಿನ ಕೆಲವು ಅಗತ್ಯಗಳನ್ನು ಪೂರೈಸಿಕೊಳ್ಳುವ ಮಾರ್ಗವೂ ಆಗಿರುತ್ತದೆ. ಆದರೆ ಈ ತರಹದ ವಿನಿಮಯದಲ್ಲಿ ಅಳತೆ, ಅಂದಾಜು, ಸೇವೆಗೆ ಕರಾರುವಾಕ್ಕಾದ ಪಾವತಿ ಇತ್ಯಾದಿ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಉದಾಹರಣೆಗೆ ಹೇಳುವುದಾದರೆ, ನಾವು ಯಾರಾದರೊಬ್ಬರಿಗೆ ``ನೀನು ಇವತ್ತಿನಿಂದ ಶೇಕಡ ಹತ್ತರಷ್ಟು ಒಳ್ಳೆಯ ಗೆಳೆಯನಾದರೆ ನಾನು ನಿನಗೆ ಅಷ್ಟೇ ಕಿಮ್ಮತ್ತಿನ ಒಂದು ಉಡುಗೊರೆ ಕೊಡುತ್ತೇನೆ,'' ಎಂಬಂಥ ಮಾತು ಹೇಳಿ ತುಂಬಾ ಜಂಬದಿಂದ ಒಂದು ಉಡುಗೊರೆಯನ್ನು ಕೊಟ್ಟರೆ, ಜನರು ನಿಜಕ್ಕೂ ಬೆಚ್ಚಿ ಬೀಳುತ್ತಾರೆ.

ಸಾಮಾನ್ಯವಾಗಿ, ಸಮಾಜದಲ್ಲಿ ಬೋಧನೆಯನ್ನು ಈ ರೀತಿಯ ದೃಷ್ಟಿಯಿಂದ ನೋಡಲಾಗುತ್ತದೆ. ಅಂದರೆ, ಇದು ಒಂದು ಬಗೆಯಲ್ಲಿ ಉಡುಗೊರೆಗಳ ಪರಸ್ಪರ ವಿನಿಮಯವಾಗಿದೆಯೇ ವಿನಾ ಈ ವೃತ್ತಿಯನ್ನು ಹಣದ ದೃಷ್ಟಿಯಿಂದ ನೋಡುವುದಿಲ್ಲ. ಬದಲಿಗೆ, ಇದನ್ನು ಸಂಬಂಧಗಳ ದೃಷ್ಟಿಯಿಂದ ನೋಡಲಾಗುತ್ತದೆ. ಭಾರತದ ಹಲವು ಭಾಗಗಳಲ್ಲಿ ತೀರಾ ಇತ್ತೀಚಿನವರೆಗೂ ಹೆಚ್ಚಿನ ಶಾಲೆಗಳಲ್ಲಿ ಅಲ್ಲಿನ ಮಕ್ಕಳಿಗೆ ಪಾಠ ಮಾಡುತ್ತಿದ್ದ ಶಿಕ್ಷಕರುಗಳಿಗೆ ಸ್ಥಳೀಯ ಶ್ರೀಮಂತರೊಬ್ಬರು ಗೌರವಾರ್ಥವಾಗಿ ಒಂದಿಷ್ಟು ಹಣವನ್ನು ಕೊಡುತ್ತಿದ್ದರು. ಮಧ್ಯಕಾಲೀನ ಭಾರತದ ಹೆಚ್ಚಿನ ಅವಧಿಯಲ್ಲಿ ಶಿಕ್ಷಣ ಪದ್ಧತಿಯು ದೇಶದಾದ್ಯಂತ ಹೀಗೆಯೇ ಇತ್ತು. ಹೀಗೆ ಕೊಡುತ್ತಿದ್ದ ಹಣವನ್ನು ಗೌರವಧನವೆಂದು ಭಾವಿಸಲಾಗುತ್ತಿತ್ತು, ವೇತನದಂತೆ ನೀಡುತ್ತಿರಲಿಲ್ಲ. ಶಿಕ್ಷಕರು ಹಣಕ್ಕಾಗಿ ಪಾಠ ಮಾಡುತ್ತಿರಲಿಲ್ಲ. ಉನ್ನತ ತಿಳಿವಳಿಕೆ ಪಡೆಯಲು ಬರುತ್ತಿದ್ದವರಿಗೆ ಪಾಠ ಮಾಡುವ ತೃಪ್ತಿಗಾಗಿ ಶಿಕ್ಷಕರು ಬೋಧನಾ ವೃತ್ತಿಯನ್ನು ಕೈಗೊಳ್ಳುತ್ತಿದ್ದರು. ಕಲಿತ ವಿದ್ಯಾರ್ಥಿಗಳು ಕೂಡ ತಮಗೆ ಕಲಿಸಿದ ಶಿಕ್ಷಕರಿಗೆ ಕೃತಜ್ಞತೆಯ ಸಂಕೇತವಾಗಿ ಉಡುಗೊರೆಗಳನ್ನು ಕೊಡುತ್ತಿದ್ದುದೂ ಸಾಮಾನ್ಯವಾಗಿತ್ತು. ಆದರೆ ಅದು ಸರಕಿಗೆ ಕೊಡುವ, ಮಾರುಕಟ್ಟೆಯ ಅರ್ಥದ

ಪಾವತಿ ಆಗಿರಲಿಲ್ಲ, ಶಿಕ್ಷಕರು ನೀಡಿದ ಕೊಡುಗೆಯ ಅಳತೆಗೋಲೂ ಆಗಿರುತ್ತಿರಲಿಲ್ಲ. ಬದಲಿಗೆ, ಈ ಉಡುಗೊರೆಗಳು ಪ್ರೀತಿ-ಗೌರವಗಳ ಸಂಕೇತಗಳಾಗಿದ್ದವು. ತಮ್ಮ ಪದತಲದಲ್ಲಿ ಒಂದಿಷ್ಟನ್ನು ಕಲಿತ ವಿದ್ಯಾರ್ಥಿಗಳು ಹೀಗೆ ಕೊಡುತ್ತಿದ್ದ ಉಡುಗೊರೆಗಳು ಅಂತಿಮವಾಗಿ ಆ ಶಿಕ್ಷಕರ ಸಂಸಾರದ ಬಂಡಿ ಸಾಗಲು ಒಂದಿಷ್ಟು ನೆರವಿಗೆ ಬರುತ್ತಿತ್ತೇನೋ? ಆದರೆ, ನೈತಿಕವಾಗಿ ಇದು ಸಾಂದರ್ಭಿಕವಾದುದಷ್ಟೇ ಆಗಿರುತ್ತಿತ್ತು. ಹಿಂದೆಲ್ಲ, ಶಿಕ್ಷಕರು ಸಾಂಸ್ಕೃತಿಕ ಕಾರಣಗಳಿಗಾಗಿ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಾರೆಯೇ ವಿನಾ ಅವರೆಂದೂ ದುಡ್ಡಿಗಾಗಿ ಈ ವೃತ್ತಿಯನ್ನು ಕೈಗೊಳ್ಳುವುದಿಲ್ಲ ಎನ್ನುವ ನಂಬಿಕೆ ಇತ್ತು. ಪಾಠ ಮಾಡಿದ್ದಕ್ಕೆ ನೀಡಲಾಗುತ್ತಿದ್ದ ಉಡುಗೊರೆಗಳು ಮತ್ತು ಸಂಭಾವನೆಗಳು ಶಿಕ್ಷಕರ ಜೀವನೋಪಾಯಕ್ಕೆ ಅತಿಮುಖ್ಯವಾದುದಾಗಿತ್ತಾದರೂ ಹೆಚ್ಚಿನ ಶಿಕ್ಷಕರು ಬೋಧನೆಯಿಂದ ಸಿಗುವ ಗೌರವಕ್ಕಾಗಿ, ಆತ್ಮತೃಪ್ತಿಗಾಗಿ ಈ ವೃತ್ತಿಯನ್ನು ಆಶ್ರಯಿಸುತ್ತಿದ್ದರು.

ಮರುಹಂಚಿಕೆ ಕೂಡ ಬಹುಮುಖ್ಯವಾದ ಒಂದು ಪ್ರಕ್ರಿಯೆಯಾಗಿದ್ದು, ಇಲ್ಲಿ ಕೂಡ ಹಣದ ಅಂಶವೇನೂ ಇರುವುದಿಲ್ಲ. ಇಲ್ಲಿ ನೇರವಾಗಿ ಸರಕು ಮತ್ತು ಸೇವೆಗಳನ್ನು ಹಣಕ್ಕಾಗಿ ವಿನಿಮಯ ಮಾಡಿಕೊಳ್ಳುವುದಕ್ಕಿಂತ ಹೆಚ್ಚಾಗಿ ರಾಜಕೀಯ ಅಥವಾ ಸಾಂಸ್ಕೃತಿಕ ಉದ್ದೇಶಗಳಿರುತ್ತವೆ. ಉದಾಹರಣೆಗೆ ಹೇಳುವುದಾದರೆ, ಒಂದು ಊರಿನ ಬಹುದೊಡ್ಡ ಭೂಮಾಲೀಕನಿಗೆ ತನ್ನ ಗೇಣಿದಾರರ ಮೂಲಕ ಸಾಕಷ್ಟು ದವಸ-ಧಾನ್ಯ, ಕಾಳು-ಕಡ್ಡಿ ಬರಬಹುದು. ಇಂತಹ ಸಂದರ್ಭಗಳಲ್ಲಿ ಅವನು ತನಗೆ ಬಂದ ದವಸ-ಧಾನ್ಯದಲ್ಲಿ ಒಂದು ಪಾಲನ್ನು ಊರಿನ ಶಿಕ್ಷಕರಿಗೆ ಕೊಟ್ಟರೆ, ಅದು ಪರೋಕ್ಷವಾಗಿ ಆ ಊರಿನ ಹಲವು ಕುಟುಂಬಗಳಿಗೆ ಕಲಿಕೆಯ ರೂಪದಲ್ಲಿ ಕೊಟ್ಟ ಕಾಣಿಕೆಯೇ ಆಗಿರುತ್ತದೆ. ಜೊತೆಗೆ, ಈ ಮರುಹಂಚಿಕೆಯಿಂದಾಗಿ ಜನರ ದೃಷ್ಟಿಯಲ್ಲಿ ಆ ಭೂಮಾಲೀಕನ ಪ್ರತಿಷ್ಠೆ ಇನ್ನಷ್ಟು ಹೆಚ್ಚಾಗುತ್ತಿತ್ತು. ಅಲ್ಲದೆ, ರಾಜಕೀಯ ದೃಷ್ಟಿಯಿಂದಲೂ ಅವನ ತೂಕ ಮತ್ತಷ್ಟು ಹೆಚ್ಚಾಗುತ್ತಿತ್ತು. ಇನ್ನೊಂದೆಡೆ, ಅಲ್ಲಿರುವ ಶಿಕ್ಷಕರು ಕೂಡ ಸಮಾಜದಲ್ಲಿ ಆ ಭೂಮಾಲೀಕನ ಸ್ಥಾನಮಾನಗಳೇನು ಎನ್ನುವ ಬಗ್ಗೆ ಯಾವ ತಕರಾರನ್ನೂ ಎತ್ತುವಂತಿರಲಿಲ್ಲ.

**ಸಮಾಜದ ಅಂತರ್ಗತಿಸಿಕೊಳ್ಳದಿರುವಿಕೆ (The Dis embedding of Society)**

ಪರಸ್ಪರ ವಿನಿಮಯ ಮತ್ತು ಮರುಹಂಚಿಕೆಯ ಪದ್ಧತಿಗಳು ಈಗಲೂ ನಮ್ಮ ಸಮಾಜದಲ್ಲಿ ಗಟ್ಟಿಯಾಗಿಯೇ ಉಳಿದುಕೊಂಡಿವೆ. ವಾಸ್ತವದಲ್ಲಿ ಹತ್ತುಹಲವು ಬಗೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬಾಂಧವ್ಯಗಳ ಭಾಗವಾಗಿರುವ ಈ ರೀತಿಯ ವಿನಿಮಯ ಪದ್ಧತಿಯನ್ನು '**ಅಂತರ್ಗತೀಕರಣ**'' (Embeddedness) ಎನ್ನುತ್ತಾರೆ. ಆದರೂ ಹೆಚ್ಚಿನ ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು, ``ನಾವು ಈ ರೀತಿಯ ಪರಸ್ಪರ ವಿನಿಮಯ ಮತ್ತು ಮರುಹಂಚಿಕೆಯಂತಹ ಪದ್ಧತಿಗಳನ್ನು ಕೈಬಿಟ್ಟು ಮಾರುಕಟ್ಟೆ ಮತ್ತು ಹಣದ ಮೂಲಕ ವಸ್ತುವಿನಿಮಯ ಪದ್ಧತಿಯೆಡೆಗೆ ಹೊರಳಿಕೊಳ್ಳುತ್ತಿದ್ದೇವೆ,'' ಎನ್ನುತ್ತಾರೆ. ಅಂದಮಾತ್ರಕ್ಕೆ, ಇದೇನೂ ಹಿಂದಿನಿಂದ ನಡೆದುಕೊಂಡು ಬಂದಿರುವಂತಹ ಒಂದು ವ್ಯವಸ್ಥೆಯನ್ನು ಸಂಪೂರ್ಣವಾಗಿ ಕೈಬಿಟ್ಟು, ನೂರಕ್ಕೆ ನೂರರಷ್ಟು ಇನ್ನೊಂದು ಹೊಸ ಪದ್ಧತಿಗೆ ಹೋಗುವಂಥದ್ದೇನಲ್ಲ. ಆದರೂ ಚಿಂತಕ ಕಾರ್ಲ್ ಪೋಲಾನ್ಯಿಯವರು ಈ ವಿದ್ಯಮಾನವನ್ನು `ಸಮಾಜದ **ಅಂತರ್ಗತಿಸಿಕೊಳ್ಳದಿರುವಿಕೆ**' (Disembedding of Society) ಎಂದು ಕರೆದಿದ್ದಾರೆ. ಆದರೆ, ನಾವು ಸಂಬಂಧದ ಚಹರೆಗಳಲ್ಲಿ ಆಗುತ್ತಿರುವ ಪಲ್ಲಟಗಳನ್ನು ನೋಡುತ್ತಿದ್ದೇವೆ **ಅಂತರ್ಗತಿಸಿಕೊಳ್ಳದಿರುವಿಕೆ**) ಎನ್ನುವ ಪದವು ಹಣದ ಬಳಕೆಯು ಜನರ ಓಡಾಟ ಮತ್ತು ನಮ್ಮ ಸುತ್ತಮುತ್ತ ಇರುವ ಸಂಪನ್ಮೂಲಗಳ ಬಳಕೆಯನ್ನು ಹೆಚ್ಚು ಸುಲಭಗೊಳಿಸಿರುವುದನ್ನು ಸೂಚಿಸುತ್ತದೆ.

ವಿನಿಮಯ ಪದ್ಧತಿಯಲ್ಲಿ ಹಣದ ಬಳಕೆಯು ಹಲವು ಅನುಕೂಲಗಳನ್ನು ಒಳಗೊಂಡಿದೆ. ಉದಾಹರಣೆಗೆ ಹೇಳುವುದಾದರೆ, ನನ್ನ ಬಳಿ ಒಂದು ಒಳ್ಳೆಯ ಕಲ್ಲಂಗಡಿ ಹಣ್ಣಿದ್ದು, ಅದನ್ನು ನಾನು ಎರಡು ಲೀಟರ್ ಹಾಲಿಗೆ ವಿನಿಮಯ ಮಾಡಿಕೊಳ್ಳಲು ಬಯಸಿದ್ದೇನೆ ಎಂದಿಟ್ಟುಕೊಳ್ಳಿ. ಆದರೆ, ಆ ಸ್ವಾದಿಷ್ಟ ರುಚಿಕರ ಹಣ್ಣನ್ನು ತೆಗೆದುಕೊಳ್ಳಲು ಇಷ್ಟಪಟ್ಟಿರುವ ನನ್ನ ಗೆಳೆಯ ಜಾಫರ್‌ನ ಬಳಿ ಎರಡು ಲೀಟರ್ ಹಾಲಿಲ್ಲ. ಅವನ ಹತ್ತಿರ ಇರುವುದೇನಿದ್ದರೂ ಒಂದು ಚೀಲ ಗೋಧಿಯಷ್ಟೆ. ಆದರೆ, ನನಗೆ ಗೋಧಿಯು ಬೇಕಾಗಿಲ್ಲ; ನನಗೆ ಬೇಕಿರುವುದೇನಿದ್ದರೂ ಹಾಲು! ಇನ್ನು, ಅಲ್ಲೇ ಹತ್ತಿರದಲ್ಲಿ ವಾಸಿಸುತ್ತಿರುವ ಸುರೇಶನ ಹತ್ತಿರ ಹಾಲೇನೋ ಇದೆ. ಆದರೆ, ಅವನಿಗೆ ನನ್ನ ಬಳಿ ಇರುವ ಕಲ್ಲಂಗಡಿ ಹಣ್ಣು ಬೇಕಾಗಿಲ್ಲ. ಬದಲಿಗೆ, ಅವನಿಗೆ ಗೋಧಿ ಬೇಕಾಗಿದೆ. ಹೀಗಾಗಿ ನಾವೆಲ್ಲರೂ –ನಾನು, ಜಾಫರ್ ಮತ್ತು ಸುರೇಶ- ಇಕ್ಕಟ್ಟಿಗೆ ಸಿಲುಕಿ ಹಾಕಿಕೊಂಡಿದ್ದೇವೆ. ವಿನಿಮಯ ಪದ್ಧತಿಯಲ್ಲಿ ಹಣದ ಬಳಕೆಯು ದಿನದಿಂದ ದಿನಕ್ಕೆ ಬೆಳೆಯುತ್ತ ಬಂದು ನಾವು ಎದುರಿಸುತ್ತಿರುವಂತಹ ಈ ರೀತಿಯ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸಿದೆ. ಹಣದ ಬಳಕೆಯು ಮುನ್ನೆಲೆಗೆ ಬಂದಿದ್ದರಿಂದ ಆದ ಅನುಕೂಲವೆಂದರೆ, ನಮ್ಮಲ್ಲಿರುವ ಗೋಧಿ, ಕಲ್ಲಂಗಡಿ ಹಣ್ಣು ಮತ್ತು ಹಾಲು ಎಲ್ಲವನ್ನೂ ಪರಸ್ಪರ ವಿನಿಮಯ ಮಾಡಿಕೊಳ್ಳಲು ಎಲ್ಲರೂ ಸಂತೋಷದಿಂದ ಒಪ್ಪಿಕೊಂಡಿದ್ದಾರೆ. ಅಂದರೆ, ಹಣದ ಬಳಕೆಯಿಂದಾಗಿ ವಿನಿಮಯವು ತುಂಬಾ ಸುಗಮವಾಗಿಯೂ ಕ್ಷಿಪ್ರವಾಗಿಯೂ ಸಂಭವಿಸುವುದು ಸಾಧ್ಯವಾಗಿದೆ. ಇಲ್ಲಿ ``**ಅಂತರ್ಗತಿಸಿಕೊಳ್ಳದಿರುವಿಕೆ**'' (Disembedding) ಎನ್ನುವ ಪದವು ನಮ್ಮ ಸಾಮಾಜಿಕ ಸಂಬಂಧಗಳ ಗೊಂಡಾರಣ್ಯದಲ್ಲಿ ಸಿಲುಕಿ ತೆವಳುತ್ತಿದ್ದ ವಿನಿಮಯ ವ್ಯವಸ್ಥೆಯು ಈಗ ಅಂತಹ ನಿರ್ಬಂಧ ಮತ್ತು ನಿಗ್ರಹಗಳಿಂದ ಮುಕ್ತವಾಗುವತ್ತ ಸಾಗುತ್ತಿರುವುದನ್ನು ಸೂಚಿಸುತ್ತಿದೆ. ಇದರಿಂದಾಗಿ ಹಲವು ಅನುಕೂಲಗಳೂ ಕೆಲವು ಅನಾನುಕೂಲಗಳೂ ಆಗಿವೆ ಎನ್ನುವುದು ವಾಸ್ತವ.

ಈ ಅಧ್ಯಾಯದ ಆರಂಭದಲ್ಲಿ ನಾವು ಪ್ರಸ್ತಾಪಿಸಿದ ಕೃಷಿ ಕಾರ್ಮಿಕರ ವಲಯದಲ್ಲಂತೂ ಸಂಬಂಧಗಳು ಮತ್ತು ಬದುಕಿನ ಅನುಭವಗಳು ತೀವ್ರವಾದ ಪಲ್ಲಟಗಳಿಗೆ ಒಳಗಾಗಿವೆ. ಮೊದಲೆಲ್ಲ, ತಾವು ಮಾಡಿದ ಕೆಲಸಕ್ಕೆ ಪ್ರತಿಯಾಗಿ ದವಸ-ಧಾನ್ಯಗಳನ್ನು ತೆಗೆದುಕೊಳ್ಳುತ್ತಿದ್ದ ರೈತಕಾರ್ಮಿಕರ ಪೈಕಿ ಈಗ ಬಹುತೇಕರು ಹಣವನ್ನೇ ತೆಗೆದುಕೊಳ್ಳುತ್ತಿದ್ದಾರೆ. ನಮ್ಮ ಸಮಾಜದ ಹೆಚ್ಚಿನ ಕಡೆಗಳಲ್ಲಿ ಈಗ ಕಾರ್ಮಿಕರಿಗೇ ಒಂದು ಮಾರುಕಟ್ಟೆ ಸೃಷ್ಟಿಯಾಗಿದೆ. ಅಂದರೆ, ಎಲ್ಲ ಕಡೆಗಳಲ್ಲೂ ಅವರಿಗೆ ಬೇಡಿಕೆ ಇದೆ. ಹೀಗಾಗಿ ಅವರು ಒಬ್ಬರಿಲ್ಲದಿದ್ದರೆ ಇನ್ನೊಬ್ಬರ ಬಳಿ ಕೆಲಸವನ್ನು ಗಿಟ್ಟಿಸಿಕೊಳ್ಳುವ ಶಕ್ತಿಯನ್ನು ಗಳಿಸಿಕೊಂಡಿದ್ದಾರೆ. ಅಂದರೆ, ಅವರಿಗೀಗ ಜೀವನೋಪಾಯದ ಹಲವು ಮಾರ್ಗಗಳಿವೆ. ಇದರ ಪರಿಣಾಮವಾಗಿ, ಹಿಂದೆ ಕೆಲಸಗಾರು ಮತ್ತು ಮಾಲೀಕರುಗಳ ನಡುವಿನ ಸಂಬಂಧದಲ್ಲಿ ಇದ್ದಂತಹ ಸಾಂಸ್ಕೃತಿಕ ಬಾಂಧವ್ಯಗಳು ತುಂಬಾ ಕ್ಷಿಪ್ರವಾಗಿ ದುರ್ಬಲವಾಗುತ್ತಿವೆ. ಈಗೇನಿದ್ದರೂ ಇವರ ನಡುವಿನ ಬಾಂಧವ್ಯದಲ್ಲಿ ಹಣವೊಂದೇ ಮುಖ್ಯವಾಗಿದ್ದು, ಇದರಾಚೆಗೆ ಈ ಸಂಬಂಧ ಉಳಿದುಕೊಂಡಿಲ್ಲ. ಕಾರ್ಮಿಕರು ಉದ್ಯೋಗವನ್ನು ಗಿಟ್ಟಿಸಿಕೊಳ್ಳುವಾಗ, ಅವರು ಸಂಪಾದಿಸಿದ ವಿದ್ಯೆಯಿಂದ ಅವರಿಗೆ ತುಂಬ ಪ್ರಯೋಜನವಾಗುತ್ತಿದೆ. ಅಂದರೆ, ಸಾಮಾನ್ಯವಾಗಿ ಉದ್ಯೋಗದಾತರು ಯಾರಿಗಾದರೂ ಉದ್ಯೋಗವನ್ನು ಕೊಡುವಾಗ ತಮ್ಮೆದುರು ಇರುವ ಅಭ್ಯರ್ಥಿಗಳಲ್ಲಿ ಸಾಂಸ್ಕೃತಿಕ ಮೌಲ್ಯಗಳು ಮತ್ತು ಕೌಶಲಗಳು ಇವೆಯೇ ಎಂದು ನೋಡುತ್ತಾರೆ. ವಿದ್ಯಾವಂತರಲ್ಲಿ ಸಹಜವಾಗಿಯೇ ಈ ಅಂಶಗಳು ಇರುವುದರಿಂದ ಹೊಸ ಬಗೆಯ ಉದ್ಯೋಗಗಳನ್ನು ಅರಸುವಾಗ ಶಿಕ್ಷಣವು ಪ್ರಮುಖ ಪಾತ್ರ ವಹಿಸುತ್ತದೆಯಲ್ಲದೆ, ಉದ್ಯೋಗದ ಸ್ಥಳಗಳಲ್ಲಿ ತಮ್ಮ ಉದ್ಯೋಗದಾತರೊಂದಿಗೆ ಭಿನ್ನವಾದ ಬಗೆಯ ಬಾಂಧವ್ಯವನ್ನು ಸ್ಥಾಪಿಸಿಕೊಳ್ಳಲೂ ಸಹಾಯವಾಗುತ್ತದೆ.

ಕೃಷಿಕಾರ್ಮಿಕರಲ್ಲಿ ಸಾಮಾನ್ಯವಾಗಿ ಹೆಚ್ಚಿನವರು ಪರಿಶಿಷ್ಟ ಜಾತಿಗೆ ಸೇರಿದವರೇ ಆಗಿರುತ್ತಾರೆ. ಹಳ್ಳಿಗಳಲ್ಲಿ ತಮ್ಮ ಧಣಿಗಳ ಕುಟುಂಬಕ್ಕೆ ಅಧೀನರಾಗಿದ್ದುಕೊಂಡು, ದೀನರಂತೆ ಬದುಕುತ್ತಿರುವ ಇವರು ನಗರ ಪ್ರದೇಶಗಳಲ್ಲಿ ಕಾರ್ಮಿಕರಿಗೆ ಬೇಡಿಕೆ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ತಮ್ಮ ಹಳೆಯ ಕಳಂಕದಿಂದ ದೂರವಾಗಿ ದೊಡ್ಡದೊಡ್ಡ ನಗರಗಳಿಗೆ ವಲಸೆ ಹೋಗಲು ತುದಿಗಾಲಿನಲ್ಲಿ ನಿಂತಿರುತ್ತಾರೆ. ಹಳ್ಳಿಯಲ್ಲಿ ಧಣಿಗೆ ತಗ್ಗಿ-ಬಗ್ಗಿ ನಡೆದುಕೊಂಡು, ಮರ್ಯಾದೆ ಇಲ್ಲದ ಬಾಳ್ವೆ ಮಾಡುವುದಕ್ಕಿಂತ ದೂರದ ಒಂದು ನಗರದಲ್ಲಿ ಅನಾಮಿಕನಂತೆ ಉಳಿದುಕೊಂಡು ಗಾಡಿ ಎಳೆದುಕೊಂಡು ಜೀವನ ಮಾಡುವುದೇ ಮೇಲು ಎನ್ನುವುದು ಹೆಚ್ಚಿನ ಜನರ ಅಭಿಪ್ರಾಯವಾಗಿದೆ.

**ಜಾತಿಕಳಚಿ ಗ್ರಾಹಕರಾಗಿ**

ಇದು 2003ನೇ ಇಸವಿಯಲ್ಲಿ ನಡೆದ ಪ್ರಸಂಗ. ಆಗ ನಾನು, ಮಧ್ಯಪ್ರದೇಶದ ಜಸಾಲ್‌ಪುರ ಎನ್ನುವ ಹಳ್ಳಿಯಲ್ಲಿ ಕೂತುಕೊಂಡು, ಅಲ್ಲಿನ ಕೆಲವು ವಯಸ್ಕರೊಂದಿಗೂ ಯುವಜನರೊಂದಿಗೂ ಮಾತನಾಡುತ್ತಿದ್ದೆ. ನನ್ನೊಂದಿಗೆ ಮಾತನಾಡುತ್ತಿದ್ದ ಇವರೆಲ್ಲ ಪರಿಶಿಷ್ಟ ಜಾತಿಗೆ ಸೇರಿದವರೇ ಆಗಿದ್ದು, ನಾವು ಆ ಊರಿನ ಒಂದು ಅಂಚಿನಲ್ಲಿದ್ದ ಅವರ ಮನೆಗಳಿಗೆ ಹತ್ತಿರದಲ್ಲೇ ಇರುವ ಜಾಗದಲ್ಲಿ ಕುಳಿತಿದ್ದೆವು. ನಾನು ಭೇಟಿ ನೀಡಿದ್ದ ಹೆಚ್ಚಿನ ಹಳ್ಳಿಗಳಲ್ಲೆಲ್ಲ ಪರಿಶಿಷ್ಟ ಜಾತಿಯವರ ಮನೆಗಳು ಊರಾಚೆಗೇ ಇದ್ದವು. ಒಂದೆರಡು ವರ್ಷಗಳಿಂದ ನಾವು ಒಬ್ಬರನ್ನೊಬ್ಬರು ಬಲ್ಲವರಾದ್ದರಿಂದ, ನಾವೀಗ ಆ ಪರಿಶಿಷ್ಟ ಜಾತಿಯ ಸದಸ್ಯರನ್ನು ``ಮೇಲ್ಜಾತಿಯ ಜನರು ನಿಮ್ಮನ್ನು ಹೇಗೆ ಕಾಣುತ್ತಾರೆ?'' ಎಂಬಂತಹ ತುಂಬಾ ಸೂಕ್ಷ್ಮವೂ ಮುಜುಗರ ಹುಟ್ಟಿಸುವಂಥದ್ದೂ ಆದ ಪ್ರಶ್ನೆಗಳನ್ನು ಕೇಳುವಷ್ಟು ಸಲುಗೆ ಬೆಳೆದಿತ್ತು. ಈ ಪ್ರಶ್ನೆಯನ್ನು ಕೇಳಿದಾಗ ಅವರು ಹೇಳಿದ ಕತೆಗಳು ಬೆಚ್ಚಿ ಬೀಳಿಸುವಂತಿದ್ದವು. ಅಂದರೆ, ತಮ್ಮ ಜೊತೆಯಲ್ಲೇ ಓದುತ್ತಿರುವ ಮೇಲ್ಜಾತಿಯ ಹುಡುಗರ ಮನೆಗಳ ಅಂಗಳಕ್ಕೆ ಕೂಡ ನಮ್ಮನ್ನು ಈಗಲೂ ಸೇರಿಸುವುದಿಲ್ಲ, ಅವರ ಮನೆಗಳಿಗೆ ಹೋದರೆ ತಮಗೊಂದು ಲೋಟ ಕಾಫಿಯನ್ನಾಗಲಿ, ಚಹಾವನ್ನಾಗಲಿ ಕುಡಿಯಲು ಕೊಡುವುದಿಲ್ಲ, ಅಕಸ್ಮಾತ್ ಕೊಟ್ಟರೂ ಅದನ್ನು ತೂತು ಬಿದ್ದಿರುವ ಲೋಟಗಳಲ್ಲಿ ಕೊಡುತ್ತಾರೆ ಎಂಬುದನ್ನೆಲ್ಲ ಹೇಳಿದರು. ಈ ಕತೆಗಳನ್ನು ಕೇಳಿ ನನ್ನ ಮನಸ್ಸಿಗೆ ಕಸಿವಿಸಿಯಾಯಿತು. ಹೀಗಾಗಿ ನಾನು, ಹಳ್ಳಿಯುದ್ದಕ್ಕೂ ಹಾದು ಹೋಗಿರುವ ಮುಖ್ಯ ರಸ್ತೆಯತ್ತ ಕಣ್ಣು ಹಾಯಿಸಿದೆ. ಅಲ್ಲಿ, ಸ್ಥಳೀಯರು `ಟ್ಯಾಕ್ಸಿ' ಎಂದು ಕರೆಯುವ ವಾಹನ ಕಾಣಿಸಿತು. ವಾಸ್ತವವಾಗಿ ಅದು ಬಾಗಿಲುಗಳಿಲ್ಲದ, ಕ್ಯಾನ್ವಾಸ್ ಬಟ್ಟೆಯ ಮೇಲುಹೊದಿಕೆಯನ್ನು ಹೊಂದಿರುವ ಜೀಪ್ ಆಗಿತ್ತು. ಏಳು ಜನರನ್ನು ಕೊಂಡೊಯ್ಯಬಲ್ಲ ಆ ವಾಹನವು ಹದಿನೈದು ಜನರನ್ನು ತುಂಬಿಕೊಂಡು, ಅವರನ್ನೆಲ್ಲ ಯಾವುದೋ ಒಂದು ಸಣ್ಣ ಕೂಲಿಯ ಕೆಲಸಕ್ಕೆ ಕರೆದುಕೊಂಡು ಹೋಗುತ್ತಿತ್ತು. ಆ ಹಳ್ಳಿಗಂತೂ ಸಾರ್ವಜನಿಕ ಸಾರಿಗೆ ಬಸ್ಸುಗಳು ಎಲ್ಲೋ 2-3 ಗಂಟೆಗೊಮ್ಮೆ ಬರುತ್ತಿದ್ದವು. ಹೀಗಾಗಿ, ಅಲ್ಲಿನ ಜನರ ಓಡಾಟಕ್ಕೆ ಈ ಟ್ಯಾಕ್ಸಿಗಳೇ ಮುಖ್ಯ ಸಾಧನಗಳಾಗಿದ್ದವು. ಹೀಗಿರುವಾಗ, ಮೊದಲೇ ಜನರಿಂದ ತುಂಬಿತುಳುಕುತ್ತಿದ್ದ ಆ ಟ್ಯಾಕ್ಸಿ ಗಕ್ಕನೆ ನಿಂತು, ಇನ್ನೂ ಇಬ್ಬರನ್ನೂ ಹತ್ತಿಸಿಕೊಂಡಿತು. ಇದನ್ನು ಗಮನಿಸಿದ ನಾನು ``ಅಲ್ಲ, ಮೊದಲೇ ಅದರಲ್ಲಿ ಜನರು ತುಂಬಿತುಳುಕುತ್ತಿದ್ದು, ಒಬ್ಬರ ಮೇಲೊಬ್ಬರು ಕೂತಿದ್ದಾರೆ. ಹೀಗಿರುವಾಗ ಆ ಟ್ಯಾಕ್ಸಿಯ ಮಾಲೀಕರು ಪರಿಶಿಷ್ಟ ಜಾತಿಯ ಪ್ರಯಾಣಿಕರನ್ನು ಹೇಗೆ ಹತ್ತಿಸಿಕೊಳ್ಳುತ್ತಾರೆ? ಅದರೊಳಗೆ ಪ್ರಯಾಣಿಕರು ಹೇಗೆ ಒಬ್ಬರಿಗೊಬ್ಬರು ಅಂಟಿಕೊಂಡು ಕೂರುತ್ತಾರೆ?'' ಎಂದು ಕೇಳಿದೆ.

ಆಗ ಆ ಯುವಜನರು ತಮ್ಮ ನೋವನ್ನು ಸಹಿಸಿಕೊಂಡು, ``ಸ್ವಾಮಿ, ನಮ್ಮೂರಿಗೆ ಈ ಟ್ಯಾಕ್ಸಿಗಳು ಬಂದ ಹೊಸತರಲ್ಲಿ ನಮ್ಮ ಕೇರಿಯ ಮುಂದೆ ನಿಲ್ಲಿಸ್ತಾನೇ ಇರ್ಲಿಲ್ಲ. ಆಗೆಲ್ಲ ಅವರು ಟ್ಯಾಕ್ಸಿಯನ್ನು ಊರಿನ ದೇವಸ್ಥಾನದ ಮುಂದೇನೇ ನಿಲ್ಲಿಸ್ತಾ ಇದ್ರು. ಆ ದೇವಸ್ಥಾನ ಇರೋದೇ ಮೇಲ್ಜಾತಿಯವರ ಕೇರಿಯಲ್ಲಿ. ಆಗೆಲ್ಲ ಈ ಟ್ಯಾಕ್ಸಿಯೋರು ನಮ್ಮೋರನ್ನು –

ಪರಿಶಿಷ್ಟ ಜಾತಿಯವರನ್ನು- ಟ್ಯಾಕ್ಸಿಗೆ ಹತ್ತಿಸಿಕೊಳ್ಳೋಕೆ ಹಿಂದೆಮುಂದೆ ನೋಡ್ತಿದ್ರು. ಆದರೆ ಆಮೇಲಾಮೇಲೆ ಸಿಕ್ಕಾಬಟ್ಟೆ ಟ್ಯಾಕ್ಸಿಗಳು ಓಡಾಡೋಕೆ ಆರಂಭವಾಗಿ, ಅರ್ಧಕ್ಕರ್ಧ ಖಾಲಿ ಓಡಾಡೋ ಹಾಗಾಯ್ತು. ಆಗ ಅವರಾಗಿಯೇ ಟ್ಯಾಕ್ಸಿಗಳನ್ನು ನಮ್ಮ ಕೇರಿಯ ಮುಂದೂ ನಿಲ್ಸೋಕೆ ಶುರು ಮಾಡಿದ್ರು. ಈಗ ನಮ್ಮೋರು ಟ್ಯಾಕ್ಸಿ ಹತ್ತಿದ್ರೂ ಯಾರೂ ತಕರಾರು ತೆಗೆಯೋದಿಲ್ಲ. ಅಕಸ್ಮಾತ್ ಯಾರಾದ್ರೂ ಕ್ಯಾತೆ ತೆಗೆದ್ರೂ ಟ್ಯಾಕ್ಸಿಯ ಚಾಲಕನೇ ಅಂಥೋರನ್ನು ಆ ಘಳಿಗೆಯೇ ಕೆಳಕ್ಕೆ ಇಳಿಸಿಬಿಡ್ತಾನೆ,'' ಎಂದರು.

ನಾನು ಆಮೇಲೆ ಈ ಕತೆಯನ್ನು ನನ್ನ ಗೆಳೆಯ ಅರವಿಂದನಿಗೆ ಹೇಳಿದೆ. ಇದನ್ನು ಕೇಳಿ ನಕ್ಕ ಅವನು, ``ಆ ಟ್ಯಾಕ್ಸಿಯ ಚಾಲಕ ಈಗ ಇವರನ್ನೆಲ್ಲ ಪರಿಶಿಷ್ಟ ಜಾತಿಯೋರು ಅಂತ ನೋಡೋದಿಲ್ಲ. ಅವನ ಪಾಲಿಗೆ ಇವರೆಲ್ಲ ಈಗ ಗಿರಾಕಿಗಳು ಅಷ್ಟೆ,'' ಎಂದ.

ಆ ಹಳ್ಳಿಯವರಿಗೆ ಈಗ ಶಾಲೆಗಳ ಬಗ್ಗೆ ಆಕರ್ಷಣೆ ಹೆಚ್ಚಿದೆ. ಹೀಗಾಗುವುದರಲ್ಲಿ ಅಲ್ಲಿ ಓಡಾಡುವ ಈ ಟ್ಯಾಕ್ಸಿಗಳು ಮತ್ತು ಬಸ್ಸುಗಳು ಪ್ರಮುಖ ಪಾತ್ರ ವಹಿಸಿವೆ. ಅಲ್ಲದೆ, ಈ ವಾಹನಗಳನ್ನು ಹಿಡಿದುಕೊಂಡು ಅಲ್ಲಿಯ ಜನರೆಲ್ಲ ಹತ್ತಿರದ ಪೇಟೆಗಳಿಗೆ ಕೆಲಸಕ್ಕೆ ಹೋಗಲು ಶುರು ಮಾಡಿದ್ದಾರೆ. ಈ ಬಗೆಯ ಉದ್ಯೋಗದ ಸೌಕರ್ಯದಿಂದಾಗಿ ಏನಾಗಿದೆಯೆಂದರೆ, ಏನೇ ಆದರೂ ವಿದ್ಯಾವಂತರಾಗಬೇಕು ಎನ್ನುವ ಆಸೆ ಮೊದಲಿಗಿಂತ ಇಮ್ಮಡಿಯಾಗಿದೆ.

ಹಳ್ಳಿ ಮತ್ತು ಪೇಟೆಗಳ ಮಾರುಕಟ್ಟೆಯ ಚಹರೆಗಳು ಕೂಡ ಈಗ ಮೊದಲಿನಂತಿಲ್ಲ. ಮೊದಲೆಲ್ಲ ನಮ್ಮ ಹಳ್ಳಿಗಳಲ್ಲೂ ಪೇಟೆಗಳಲ್ಲೂ ತುಂಬಾ ಅನೌಪಚಾರಿಕವಾದ ಸಂತೆ ಸೇರುತ್ತಿತ್ತು, ಇಲ್ಲವೇ ಅಡ್ಡಾದಿಡ್ಡಿಯಾಗಿರುತ್ತಿದ್ದ ಪೇಟೆಬೀದಿಗಳು ಇರುತ್ತಿದ್ದವು. ಆದರೆ, ಈಗ ಎಲ್ಲ ಕಡೆಗಳಲ್ಲೂ ವ್ಯವಸ್ಥಿತವಾದ ನಿಯಂತ್ರಿತ ಮಾರುಕಟ್ಟೆಗಳು ಬಂದಿದ್ದು, ಇಲ್ಲಿ ಸಿಗುವ ಎಲ್ಲ ವಸ್ತುಗಳ ಮೇಲೂ ಅವುಗಳಿಗೆ ಸಂಬಂಧಿಸಿದ ವಿವರಗಳು ಲಭ್ಯವಿರುತ್ತವೆ. ಹೀಗಾಗಿ, ಅಲ್ಲಿಗೆ ಗ್ರಾಹಕನಾಗಿ ಹೋಗುವವನಿಗೆ ತಾನು ಕೇಳಿದ ವಸ್ತುವೇ ಅಲ್ಲಿ ಸಿಗುತ್ತದೆ ಎನ್ನುವ ಖಾತ್ರಿ ಇರುತ್ತದೆ. ಆದರೆ, ಹಳ್ಳಿಯ ಸಂತೆಯಲ್ಲೋ, ಪೇಟೆಬೀದಿಯಲ್ಲೋ ಸಾಮಾನು-ಸರಂಜಾಮುಗಳನ್ನು ಖರೀದಿಸುವವನಿಗೆ ಈ ಖಾತ್ರಿ ಇರುತ್ತಿರಲಿಲ್ಲ. ಅಂದರೆ, ಅಲ್ಲಿ ಅವನು ಕೇಳಿದ್ದೇ ಒಂದಾದರೆ, ವ್ಯಾಪಾರಿಯು ಅವನಿಗೆ ಕೊಡುವುದೇ ಇನ್ನೊಂದಾಗಿರುತ್ತಿತ್ತು. ಹೀಗಾಗಿ, ಅಲ್ಲಿ ಗ್ರಾಹಕನು ತುಂಬಾ ಹುಷಾರಾಗಿರಬೇಕಾಗಿತ್ತು. ಅಲ್ಲದೆ, ಅಲ್ಲೆಲ್ಲ ಮಾರುವವನೂ ಕೊಳ್ಳುವವನೂ ತಮ್ಮ ಲಾಭಕ್ಕಾಗಿ ಜಗ್ಗಾಡುವುದು ಸಾಮಾನ್ಯವಾಗಿತ್ತು. ಜೊತೆಗೆ, ಅಲ್ಲಿ ಯಾವುದೇ ಒಂದು ವಸ್ತುವಿನ ಗುಣಮಟ್ಟದ ಬಗ್ಗೆ ಏನನ್ನೂ ಖಚಿತವಾಗಿ ಹೇಳುವುದು ಸಾಧ್ಯವಿರಲಿಲ್ಲ ಮತ್ತು ಅಲ್ಲಿ ಮುಖ್ಯವಾಗಿ ಒಂದು ಬಗೆಯ ಚಾಲಾಕಿತನ ಕೆಲಸ ಮಾಡುತ್ತಿತ್ತು. ಹೀಗಾಗಿ ಜನರು ಗುಣಮಟ್ಟದ ಸಾಮಾನು-ಸರಂಜಾಮುಗಳನ್ನು ಖರೀದಿಸಲು ತಮಗೆ ಚೆನ್ನಾಗಿ ಗೊತ್ತಿರುವ ವ್ಯಾಪಾರಿಗಳನ್ನೇ ನೆಚ್ಚಿಕೊಂಡಿರುತ್ತಿದ್ದರು. ಅಂದರೆ, ಇಲ್ಲೂ ವೈಯಕ್ತಿಕ ಮತ್ತು ಕೌಟುಂಬಿಕ ಸ್ತರದಲ್ಲಿದ್ದ ಬಾಂಧವ್ಯಗಳೇ ಕೆಲಸ ಮಾಡುತ್ತಿದ್ದವು. ಆದರೆ, ಈಗ ಚಾಲ್ತಿಗೆ ಬಂದಿರುವ ಹೆಚ್ಚಿನ ಆನ್‍ಲೈನ್ ಮಳಿಗೆಗಳು ಇದಕ್ಕೆ ತದ್ವಿರುದ್ಧವಾಗಿವೆ. ಅಂದರೆ, ನೀವು ಯಾವುದೋ ಒಂದು ವಸ್ತುವನ್ನು ಖರೀದಿಸಲು ಮುಂದಾದರೆ ಅಲ್ಲಿ ಅದಕ್ಕೆ ಸಂಬಂಧಿಸಿದ ಸಂಪೂರ್ಣ ಮಾಹಿತಿ ಇರುತ್ತದೆ. ಹಾಗೆಯೇ, ನೀವೇನಾದರೂ ಅಲ್ಲಿ ಏನಾದಾರೂ ತಕರಾರನ್ನೆತ್ತಿದರೆ ಈ ಆನ್‍ಲೈನ್ ಮಳಿಗೆಗಳು ಕೂಡಲೇ ನಿಮ್ಮೊಂದಿಗೆ ವ್ಯವಹರಿಸುವುದನ್ನು ನಿಲ್ಲಿಸಿ, ಹಿಂದೆ ಸರಿಯುತ್ತವೆ. ಎಲ್ಲ ವಸ್ತುಗಳಿಗೂ ಒಂದು ಮಟ್ಟವನ್ನು ನಿಗದಿಪಡಿಸುವುದರಿಂದ ಒಬ್ಬ ವ್ಯಕ್ತಿಯು ಕೆಲಸ ಮಾಡುವ ಬಗೆಯಲ್ಲಿ ಮತ್ತು ಅವನು ಗ್ರಾಹಕರೊಂದಿಗೆ ಹೊಂದುವ ಸಂಬಂಧದಲ್ಲಿ ಭಾರೀ ಬದಲಾವಣೆ ಕಂಡುಬರುತ್ತದೆ.

ಈ ಬೆಳವಣಿಗೆಗಳೆಲ್ಲವೂ ಶಿಕ್ಷಣ ವ್ಯವಸ್ಥೆಯ ಮೇಲೆ ಅಗಾಧ ಪರಿಣಾಮವನ್ನು ಬೀರಿವೆ. 20ನೇ ಶತಮಾನದ ಕೊನೆಯವರೆಗೂ ಮಧ್ಯಕಾಲೀನ ಭೂಮಾಲೀಕರು ಮತ್ತು ಆ ಕಾಲದ ರಾಜ-ಮಹಾರಾಜರ ಪರಿವಾರದಲ್ಲಿ ಗುಮಾಸ್ತರಾಗಿ ಮತ್ತು ಅಧಿಕಾರಿಗಳಾಗಿ ಕೆಲಸ ಮಾಡುತ್ತಿದ್ದ ಬೆರಳೆಣಿಕೆಯಷ್ಟು ಕುಟುಂಬಗಳ ಜನರಿಗೆ ಮಾತ್ರ ಶಿಕ್ಷಣವು ಉದ್ಯೋಗವನ್ನು ದೊರಕಿಸಿಕೊಡುವ ಒಂದು ಮಾರುಕಟ್ಟೆ ಶಕ್ತಿಯಾಗಿತ್ತು. ಉಳಿದವರಿಗೆಲ್ಲ ಶಿಕ್ಷಣವು ಕೇವಲ ಸಾಂಸ್ಕೃತಿಕ ಪಾತ್ರವನ್ನು ವಹಿಸುವ ಒಂದು ಸಾಧನವಾಗಿತ್ತಷ್ಟೆ. ಈ ನಿಟ್ಟಿನಲ್ಲಿ ಈಗ ಬಹುಮುಖ್ಯವಾದ ಪಲ್ಲಟವೊಂದು ಸಂಭವಿಸುತ್ತಿದ್ದು, ಹೆಚ್ಚುಹೆಚ್ಚು ಜನರು ಈಗ ತಮ್ಮ ಕೌಶಲ್ಯವನ್ನು ಮುಂದಿಟ್ಟುಕೊಂಡು ಜೀವನೋಪಾಯವನ್ನು ಕಂಡುಕೊಳ್ಳುತ್ತಿದ್ದಾರೆ. ಇಂದು ಶಿಕ್ಷಣ ಉದ್ಯೋಗ ಪಡೆಯಲು ಮುಖ್ಯ ಪಾತ್ರ ವಹಿಸಿದೆ. ಕಾರ್ಮಿಕರ ಮಾರುಕಟ್ಟೆಯಲ್ಲಿ ಹೇಗೋ ಅವಕಾಶ ಗಿಟ್ಟಿಸಿಕೊಳ್ಳುವುದೇ ಇಂದು ಶಿಕ್ಷಣದಿಂದ ಎದುರು ನೋಡುವ ಬಹುಮುಖ್ಯ ನಿರೀಕ್ಷೆಯಾಗಿದೆ. ಸಮಾಜ ಇಂದು ಅಂತರ್ಗತಿಸಿಕೊಳ್ಳದಿರುವ ಕಡೆಗೆ ಪಲ್ಲಟಗೊಳ್ಳುತ್ತಿರುವುದು ಶಿಕ್ಷಣದ ಪಾತ್ರವನ್ನು ತುಂಬಾ ಮೂಲಭೂತ ಸ್ವರೂಪದಲ್ಲೇ ಬದಲಿಸುತ್ತಿದೆ. ಆದರೆ 50-75 ವರ್ಷಗಳ ಹಿಂದೆ ಪರಿಸ್ಥಿತಿ ಹೀಗಿರಲಿಲ್ಲ. ಆಗೆಲ್ಲ, ಜನರಿಗೆ ಉನ್ನತ ಮಟ್ಟದ ಸಂಸ್ಕೃತಿಯನ್ನು ಪರಿಚಯಿಸುವುದೇ ಶಿಕ್ಷಣದ ಬಹುಮುಖ್ಯ ಪಾತ್ರವಾಗಿದೆ ಎಂದು ಹೆಚ್ಚಿನ ಜನರು ಭಾವಿಸಿಕೊಂಡಿದ್ದರು. ಹೀಗಾಗಿ ಅವರೆಲ್ಲರೂ ಬಾಹ್ಯರೂಪದಲ್ಲಿ ತಮ್ಮನ್ನು ಸುಸಂಸ್ಕೃತರಂತೆ ಬಿಂಬಿಸುವ ಅಭಿಜಾತ ಸಾಹಿತ್ಯ ಕೃತಿಗಳನ್ನು, ಮಹಾಕಾವ್ಯಗಳನ್ನು ಮತ್ತು ಸ್ವಲ್ಪ ಮಟ್ಟಿನ ಜ್ಯೋತಿಷ್ಯವನ್ನು ಓದುತ್ತಿದ್ದರು. ಆದರೆ, ಈಗ ಸಮಾಜದಲ್ಲಿ ಈ ಪ್ರವೃತ್ತಿ ಕಂಡುಬರುವುದಿಲ್ಲ. ಬದಲಿಗೆ, ಹೆಚ್ಚಿನವರು ಹೇಗಾದರೂ ಮಾಡಿ ತಮಗೆ ಕೈತುಂಬಾ ಹಣ ತರುವ ಮತ್ತು ಅದರ ಜೊತೆಗೇ ಕೆಲವೊಮ್ಮೆ ಒಂದಿಷ್ಟು ಅಧಿಕಾರವನ್ನೂ ತಂದುಕೊಡುವಂತಹ ಒಂದು ಉದ್ಯೋಗವನ್ನು ಗಿಟ್ಟಿಸಿಕೊಳ್ಳಬೇಕೆಂದು ಹೋರಾಡುತ್ತಿದ್ದಾರೆ. ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳಿಗೂ ಶಿಕ್ಷಣದ ಗುರಿ ಬದಲಾಗುತ್ತಿರುವುದಕ್ಕೂ ನಿಕಟವಾದ ಸಂಬಂಧವಿದೆ.

ಸಮಾಜವನ್ನು ಹೀಗೆ ಮಾರುಕಟ್ಟೆ ಮತ್ತು ವಾಣಿಜ್ಯ ದೃಷ್ಟಿಯಿಂದ ಅಥವಾ ಸರಕೀಕರಣದ ದೃಷ್ಟಿಯಿಂದ ನೋಡುವುದರಿಂದಾಗುವ ಬದಲಾವಣೆಗಳು ಅತ್ಯಂತ ವ್ಯಾಪಕವಾದ ಮಿಶ್ರ ರೀತಿಯ ಪರಿಣಾಮಗಳನ್ನು ಬೀರುವಂಥದ್ದಾಗಿವೆ. `ಸರಕೀಕರಣ' (Commodification) ಎಂದರೆ ಇನ್ನೇನೂ ಅಲ್ಲ, ಮಾರುಕಟ್ಟೆ ಮತ್ತು ಹಣದ ಮೂಲಕವೇ ಸಮಾಜದ ಪ್ರತಿಯೊಂದು ಸೇವೆ ಮತ್ತು ಉತ್ಪನ್ನಗಳನ್ನೂ ವಿನಿಮಯ ಮಾಡಿಕೊಳ್ಳುವುದು ಎಂದರ್ಥ. ಆದರೆ, ಎಷ್ಟೋ ಸಂಗತಿಗಳು ವಿನಿಮಯದ ಈ ರೂಪವನ್ನು ಪಡೆದುಕೊಳ್ಳಲಾರವು. ಉದಾಹರಣೆಗೆ ಹೇಳುವುದಾದರೆ, ಒಂದು ಕುಟುಂಬದಲ್ಲಿ ಅದರ ಸದಸ್ಯರಿಗೆಲ್ಲ ಊಟ-ತಿಂಡಿಯನ್ನು ಒದಗಿಸುವುದನ್ನು ಮತ್ತು ಅದಕ್ಕೆ ಪ್ರತಿಯಾಗಿ ಆ ಸದಸ್ಯರು ಕುಟುಂಬಕ್ಕೆ ಏನಾದರೂ ಕಾಣಿಕೆ ನೀಡುವುದನ್ನು ಪರಸ್ಪರ ಪ್ರೀತಿ ಮತ್ತು ಕಕ್ಕುಲತೆಯ ದೃಷ್ಟಿಯಿಂದ ನೋಡಲಾಗುತ್ತದೆ ಅಷ್ಟೆ. ಇದನ್ನೇನಾದರೂ ಯಾರಾದರೂ ದುಡ್ಡಿನಿಂದ ಅಳೆಯತೊಡಗಿದರೆ, ಜನರು ಬೆಚ್ಚಿ ಬೀಳುತ್ತಾರೆ. `ಸಮಾಜಗಳ ಸರಕೀಕರಣ' (Commodification of Societies) ಎಂದರೆ, ಈ ಹಿಂದೆ ಮಾರುಕಟ್ಟೆಯ ಭಾಗವಾಗದೇ ಇದ್ದಂತಹ ಸಂಗತಿಗಳೆಲ್ಲ ಈಗ ಇದರ ವ್ಯಾಪ್ತಿಗೆ ಬರುತ್ತಿವೆ ಎಂದೇ ಅರ್ಥ. ಕೆಲವೊಮ್ಮೆ ಇದು ಸಮಾಜದ ಸದಸ್ಯರಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ತಂದುಕೊಟ್ಟರೆ, ಇನ್ನು ಕೆಲವೊಮ್ಮೆ ತನ್ನ ಸದಸ್ಯರು ಮಾರುಕಟ್ಟೆ ಶಕ್ತಿಗಳ ಕೈಯಲ್ಲಿ ಸಿಲುಕಿ ಹಾಕಿಕೊಳ್ಳುವಂತೆ ಮಾಡುವುದೂ ಉಂಟು. ಇಂತಹ ಸಂದರ್ಭಗಳಲ್ಲಿ, ತೊಂದರೆಗೆ ಸಿಕ್ಕಿಹಾಕಿಕೊಳ್ಳುವ ವ್ಯಕ್ತಿಗಳಿಗೆ ಸಮಾಜದ ಸಾಂಸ್ಕೃತಿಕ ಬೆಂಬಲವೇ ಸಿಕ್ಕುವುದಿಲ್ಲ. ಒಟ್ಟಾರೆಯಾಗಿ ಹೇಳುವುದಾದರೆ, ಈ ಬದಲಾವಣೆಗಳು ಶಿಕ್ಷಣ ಕ್ಷೇತ್ರದ ಮೇಲೆ ಅಗಾಧವಾದ ಪರಿಣಾಮಗಳನ್ನು ಉಂಟುಮಾಡುತ್ತಿದ್ದು, ಶಿಕ್ಷಣ ಸಂಸ್ಥೆಗಳಲ್ಲಿ ಈಗ ಏನನ್ನು ಬೋಧಿಸಬೇಕು/ಕಲಿಸಬೇಕು ಮತ್ತು ಶಾಲಾಕಾಲೇಜುಗಳು

ಯಾರ ಒಳಿತನ್ನು ಗುರಿಯಾಗಿ ಇಟ್ಟುಕೊಳ್ಳಬೇಕು ಹಾಗೂ ಶಿಕ್ಷಣದ ಉದ್ದೇಶ ಏನಾಗಿರಬೇಕು ಎನ್ನುವುದನ್ನು ಯೋಚಿಸುವಂತೆ ಮಾಡಿವೆ.

ಮಾರುಕಟ್ಟೆಗಳ ಪ್ರಮುಖ ಆಯಾಮ ಏನೆಂದರೆ, ಯಾರಲ್ಲಿ ಹೆಚ್ಚು ಹಣವಿದೆಯೋ ಅಂಥವರಿಗೆ ಅದು ಮತ್ತಷ್ಟು ಖರೀದಿಸುವ ಶಕ್ತಿಯನ್ನು ದಯಪಾಲಿಸುತ್ತದೆ. ಒಂದು ದೃಷ್ಟಿಯಿಂದ ಹೇಳುವುದಾದರೆ, ಸಮಾಜದ ಜನರು ಸಮಾನರಾಗಿದ್ದಾರೆ, ನಿಜ. ಆದರೆ, ಇನ್ನೊಂದು ದೃಷ್ಟಿಯಿಂದ ಹೇಳುವುದಾದರೆ, ಯಾರು ಮಾರುಕಟ್ಟೆಯನ್ನು ಹೆಚ್ಚಾಗಿ ಪ್ರಭಾವಿಸುತ್ತಾರೆ ಎನ್ನುವ ಅಂಶವು ಈಗ ಸಮಾಜವನ್ನು ವಿಭಜಿಸಿ, ಅಸಮಾನತೆಯನ್ನು ಸೃಷ್ಟಿಸಿದೆ. ಸಮಾಜದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಸರಕೀಕರಣ ಮತ್ತು ಮಾರುಕಟ್ಟೆ ಶಕ್ತಿಯು ಶಿಕ್ಷಣಕ್ಕೆ ಸಂಬಂಧಿಸಿದಂತೆ ``ಹೆಚ್ಚು ಹಣವುಳ್ಳವರು ಶಿಕ್ಷಣ ಕ್ಷೇತ್ರದ ಮೇಲೆ ಹೇಗೆ ತಮ್ಮ ಪ್ರಭಾವವನ್ನು ಬೀರುತ್ತಾರೆ?'' ಎನ್ನುವ ಪ್ರಶ್ನೆಯೂ ಇದೆ. ಉದಾಹರಣೆಗೆ ಹೇಳುವುದಾದರೆ, ಶಿಕ್ಷಣವು ಶ್ರೀಮಂತರ ಬೇಡಿಕೆಗಳು ಮತ್ತು ಅಗತ್ಯಗಳಿಗೆ ಸ್ಪಂದಿಸಬೇಕೋ ಅಥವಾ ಕೈಯಲ್ಲಿ ಕವಡೆ ಕಾಸೂ ಇಲ್ಲದಂತಹ ಬಡವರ ಬೇಕು-ಬೇಡಗಳಿಗೆ ಸ್ಪಂದಿಸಬೇಕೋ ಎನ್ನುವ ಪ್ರಶ್ನೆ ಇಲ್ಲಿ ಉದ್ಭವಿಸಿದೆ. ಸಮಾಜದಲ್ಲಿರುವ ಈ ಎರಡೂ ವರ್ಗಗಳು ಶಿಕ್ಷಣದಿಂದ ತಾವು ಪಡೆಯಬೇಕು ಎಂದುಕೊಂಡಿರುವ ಫಲಗಳು ಬೇರೆಬೇರೆಯೇ ಇರಬಹುದು. ಇಲ್ಲಿ ಕೇವಲ ಶ್ರೀಮಂತನೊಬ್ಬ ಬಯಸುವಂಥ ಜ್ಞಾನವನ್ನು ಮಾತ್ರ ಪೂರೈಸುವ ಪಠ್ಯಕ್ರಮವು ಒಬ್ಬ ಬಡವನಿಗೆ ಅರ್ಥಹೀನವೆನಿಸಬಹುದು. ಶ್ರೀಮಂತರು ಮತ್ತು ಅಧಿಕಾರಸ್ಥರು ಮಾಡುತ್ತಿರುವುದನ್ನೆಲ್ಲ ಕುರುಡಾಗಿ ಒಪ್ಪಿಕೊ ಮತ್ತು ಅವರನ್ನು ಎಂದೂ ಪ್ರಶ್ನಿಸಲು ಹೋಗಬೇಡ ಎಂದೇನಾದರೂ ಹೇಳಿಕೊಡುವ ಶಿಕ್ಷಣ ಪದ್ಧತಿ ಇದ್ದರೆ ಅದು ಬಡವನ ಪಾಲಿಗೆ ಅಪಾಯಕಾರಿಯಾಗಿಯೂ ಪರಿಣಮಿಸಬಹುದು. ಆದರೆ, ಇಲ್ಲೊಂದು ಮುಖ್ಯವಾದ ಸಂಗತಿ ಇದೆ. ಅದೇನೆಂದರೆ, ಹೆಚ್ಚಿನ ಭಾರತೀಯರು ``ಕೆಟ್ಟ ಕೆಲಸಗಳ ವಿರುದ್ಧ ಪ್ರತಿಭಟಿಸಲು ಮತ್ತು ನ್ಯಾಯಸಮ್ಮತವಾದ ವ್ಯವಹಾರಕ್ಕಾಗಿ ಒತ್ತಾಯಿಸುವ ಸಲುವಾಗಿ ನಾವು ಶಿಕ್ಷಿತರಾಗಬೇಕು,'' ಎಂದು ನಂಬಿದ್ದಾರೆ. ಆದರೆ, ಇದು ಹೆಚ್ಚಿನ ಶಕ್ತಿಶಾಲಿಗಳಿಗಳಾದವರಿಗೆ ಇಷ್ಟವಾಗುವುದಿಲ್ಲ. ಒಟ್ಟಿನಲ್ಲಿ `ಶಿಕ್ಷಣದ ಸರಕೀಕರಣ'ವು ಇಂಥ ಹಲವು ಪ್ರಶ್ನೆಗಳನ್ನು ಎಬ್ಬಿಸುತ್ತದೆ.

ಈ ಬಗೆಯ `ಸರಕೀಕರಣ'ದಿಂದ ಇನ್ನೊಂದು ಬದಲಾವಣೆಯೂ ಕಾಣಿಸಿಕೊಳ್ಳುತ್ತಿದೆ. ಅದೇನೆಂದರೆ, ಶಿಕ್ಷಕರು-ವಿದ್ಯಾರ್ಥಿಗಳು-ಪೋಷಕರ ನಡುವಿನ ಸಂಬಂಧಗಳು ಈಗ ಮೊದಲಿನಂತೆ ಆರ್ದ್ರವಾಗಿಲ್ಲ. ಬದಲಿಗೆ, ಈ ಸಂಬಂಧಗಳು ಈಗ ಹೆಚ್ಚಾಗಿ ವ್ಯಾಪಾರಿ ಮತ್ತು ಗಿರಾಕಿಗಳ ನಡುವಿನ ಬಾಂಧವ್ಯದಂತಾಗಿವೆ. ಹೀಗಾಗಿ, ನಮ್ಮ ಶಿಕ್ಷಣ ಸಂಸ್ಥೆಗಳು ಈಗ ಹಣ ತಂದುಕೊಡುವ ಉದ್ದಿಮೆಯಂತಾಗಿದ್ದು, ಅಲ್ಲಿ ಪಾಠ ಮಾಡುವ ಬೋಧಕ ಸಿಬ್ಬಂದಿಗಳು ವಿಮಾ ಕಂಪನಿಯ ಏಜೆಂಟುಗಳಂತೆ ಆಗಿಹೋಗಿದ್ದಾರೆ. ಒಟ್ಟಿನಲ್ಲಿ, ಇದು ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಸಂಬಂಧದಲ್ಲಿ ಅಗಾಧವಾದ ಬದಲಾವಣೆಯನ್ನು ಉಂಟುಮಾಡುತ್ತದೆ. ಇಂತಹ ಕಡೆಗಳಲ್ಲಿ ಶಿಕ್ಷಕರು ತಮ್ಮ ಸಂಸ್ಥೆಯ ಆಡಳಿತ ಮಂಡಳಿಯು ನಿಗದಿಪಡಿಸಿದ ಕೆಲಸವನ್ನು ಮಾಡುತ್ತಾರಷ್ಟೆ. ಇಂಥ ಕಡೆಗಳಲ್ಲಿ ಶಿಕ್ಷಕರಿಗೆ ಉನ್ನತವಾದುದನ್ನು ಚಿಂತಿಸುವುದಕ್ಕಾಗಲಿ, ವಿದ್ಯಾರ್ಥಿಗಳು ಈ ಲೋಕವನ್ನು ಗ್ರಹಿಸುವ ನಿಟ್ಟಿನಲ್ಲಿ ನೆರವು ನೀಡುವುದಕ್ಕಾಗಲಿ ಅಥವಾ ಸೃಜನಶೀಲವಾಗಿ ಆಲೋಚಿಸುವುದಕ್ಕಾಗಲಿ ಕಿಂಚಿತ್ತೂ ಅವಕಾಶವಿರುವುದಿಲ್ಲ. ಹಿಂದಿನ ದಿನಗಳಲ್ಲಿ ವಿದ್ಯಾರ್ಥಿಗಳಿಗೆ ಶ್ರದ್ಧೆಯಿಂದ ಪಾಠ ಮಾಡುತ್ತ, ವಿದ್ಯಾರ್ಥಿಗಳು ಕೊಡುತ್ತಿದ್ದ ಉಡುಗೊರೆಯನ್ನು ಸ್ವೀಕರಿಸುತ್ತಿದ್ದ ಮತ್ತು ನಿಜವಾದ ಬೌದ್ಧಿಕ ಚಿಂತಕರಂತಿದ್ದ ಶಿಕ್ಷಕರಿಗೆ ಹೋಲಿಸಿದರೆ ಇಂದಿನ ಚಿತ್ರಣ ತದ್ವಿರುದ್ಧವಾಗಿದೆ. ಹಾಗೆಯೇ, ಹಿಂದೆಲ್ಲ ಶಾಲೆಗಳೆಂದರೆ ಮರುಹಂಚಿಕೆಯ ಮತ್ತು ತಾನು ಸಮಾಜಕ್ಕೆ ಕೊಡುತ್ತಿದ್ದ ಕೊಡುಗೆಗೆ ಹೋಲಿಸಿದರೆ ಸ್ವತಃ ತಾನು

ಕಡಿಮೆ ಪ್ರತಿಫಲವನ್ನು ಪಡೆಯುತ್ತಿದ್ದ ಹಾಗೂ ತುಂಬಾ ವಿಶಾಲವಾದ ಅರ್ಥದಲ್ಲಿ ಸಮಾಜದ ಸಂಪತ್ತನ್ನು ಹಂಚುತ್ತಿದ್ದ ತಾಣಗಳಾಗಿದ್ದವು. ಆದರೆ, ಇವತ್ತಿನ ಶಾಲಾಕಾಲೇಜುಗಳಲ್ಲಿ ಖಂಡಿತವಾಗಿಯೂ ಈ ಲಕ್ಷಣಗಳಿಲ್ಲ.

ಮಾರುಕಟ್ಟೆ ಶಕ್ತಿಯು ಸಮಾಜದಲ್ಲಿನ ಕೆಲವು ಸಂಘರ್ಷಗಳನ್ನು ತೊಡೆದು ಹಾಕಬಹುದು ಎನ್ನುವುದು ಎಷ್ಟು ನಿಜವೋ, ಅವು ಹಳೆಯ ಸಂಘರ್ಷಗಳ ಜಾಗದಲ್ಲಿ ಹೊಸ ಸಂಘರ್ಷಗಳನ್ನು ಹುಟ್ಟುಹಾಕಲೂಬಹುದು ಎನ್ನುವುದೂ ಅಷ್ಟೇ ನಿಜ. ಶಿಕ್ಷಣ ಕ್ಷೇತ್ರದಲ್ಲಿ ಕಂಡುಬರುತ್ತಿರುವ ಮಾರುಕಟ್ಟೆ ಶಕ್ತಿಗಳ ಬೆಳವಣಿಗೆಯು ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕಿದ್ದು, ಇವುಗಳ ಬಗ್ಗೆ ಗಂಭೀರವಾಗಿ ಚಿಂತಿಸುವುದು ಅವಶ್ಯವಾಗಿದೆ.

**ಭಾಗ-2**

## ಭಾರತದಲ್ಲಿ ಬಂಡವಾಳಶಾಹಿ

ಈ ಸರಣಿಯಲ್ಲಿ ಬರೆದ ಹಿಂದಿನೊಂದು ಲೇಖನದಲ್ಲಿ ಸರಕು ಅಥವಾ ವಸ್ತುಗಳ ರೂಪದಲ್ಲಿ ವಿನಿಮಯ ಮಾಡಿಕೊಳ್ಳುವ ವಿಧಾನದ ಬೆಳವಣಿಗೆಯು ನಮ್ಮ ಬದುಕಿನ ಸಂಬಂಧಗಳಲ್ಲಿ ಬದಲಾವಣೆ ತಂದಿದೆ ಮತ್ತು ನಮ್ಮ ಈ ಕಾಲಘಟ್ಟದಲ್ಲಿ ಶಿಕ್ಷಣ ಎನ್ನುವುದರ ಅರ್ಥದ ಮೇಲೆ ಭಾರೀ ಪರಿಣಾಮ ಬೀರಿದೆ ಎಂದೂ ಸೂಚಿಸಲಾಗಿತ್ತು. ಶಿಕ್ಷಣವು ಉದ್ದೇಶಿಸಬೇಕಾದ ಸಾಮಾಜಿಕ ಸಂಬಂಧಗಳು ಮತ್ತು ಶಿಕ್ಷಣ ವ್ಯವಸ್ಥೆಯೊಳಗಿರುವ ಅನುದಿನದ ಬದುಕಿನ ಅರ್ಥಗಳನ್ನು ನೋಡಿದರೆ, ಅವೆಲ್ಲವುಗಳ ಮೇಲೂ ಈ ಪರಿಣಾಮ ಉಂಟಾಗಿರುವುದು ಗೊತ್ತಾಗುತ್ತದೆ. ಭಾರತದಲ್ಲಿ ಬಂಡವಾಳಶಾಹಿ ಪದ್ಧತಿಯು ನಮ್ಮ ಶಿಕ್ಷಣ ವ್ಯವಸ್ಥೆಯ ಮೇಲೆ ಗಾಢ ಪರಿಣಾಮವನ್ನು ಬೀರುತ್ತಿರುವ ಒಂದು ಪ್ರಮುಖ ಪ್ರಕ್ರಿಯೆಯಾಗಿದೆ. ಆದರೆ, ಈ ಬಗೆಯ ಪರಿಣಾಮಗಳಿಗೆ ಬಂಡವಾಳಶಾಹಿ ವ್ಯವಸ್ಥೆಯ ಬೆಳವಣಿಗೆಯೊಂದೇ ಕಾರಣವಲ್ಲವೆನ್ನುವುದು ನಿಜ. ಏಕೆಂದರೆ, ಪ್ರಜಾಪ್ರಭುತ್ವದ ಬೆಳವಣಿಗೆಯೊಂದಿಗೆ, ತಮ್ಮದೇ ಆದ ಹಿತಾಸಕ್ತಿಗಳನ್ನು ಪ್ರಧಾನವಾಗಿಟ್ಟುಕೊಂಡಿರುವ ಅನೇಕ ಗುಂಪುಗಳು ಮುನ್ನೆಲೆಗೆ ಬಂದಿರುವುದು, ನಿಷ್ಠುರ ಬೌದ್ಧಿಕ ಸಂಸ್ಕೃತಿಗಳ ಸೃಷ್ಟಿ, ಧಾರ್ಮಿಕ ಸಂಘಸಂಸ್ಥೆಗಳು ಒಂದೆಡೆಗೆ ಬಂದಿರುವುದು ಇತ್ಯಾದಿ ಬೆಳವಣಿಗೆಗಳು ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಎಳೆದಾಡುತ್ತಿವೆ. ಎರಡು ಸಂಚಿಕೆಗಳ ಹಿಂದೆ ನಾನು ಸಂಕೀರ್ಣ ಸಮಾಜವೊಂದರ ಸೃಷ್ಟಿಯ ಬಗ್ಗೆ ಬರೆದಿದ್ದೆ. ಆ ಲೇಖನದಲ್ಲಿ ನಾನು, ನಮ್ಮ ದೇಶದಲ್ಲಿ ಇಂಥ ಸಂಕೀರ್ಣ ಸಮಾಜವನ್ನು ದಿನದಿಂದ ದಿನಕ್ಕೆ ಹಿಗ್ಗುತ್ತಿರುವ ಬಂಡವಾಳಶಾಹಿ ವ್ಯವಸ್ಥೆಯು ಭಾಗಶಹವಾದರೂ ಮುನ್ನಡೆಸುತ್ತಿರುತ್ತದೆ ಎಂದು ಹೇಳಿದ್ದೆ. ಆದರೆ, ಸಂಕೀರ್ಣ ಸಮಾಜವೊಂದು ಕೇವಲ ಬಂಡವಾಳಶಾಹಿಯೊಂದರಿಂದಲೇ ತೃಪ್ತವಾಗುವುದಿಲ್ಲ. ಬದಲಿಗೆ. ಅದರ ಅಗತ್ಯಗಳು ಇದಕ್ಕಿಂತ ಹೆಚ್ಚಾಗಿರುತ್ತವೆ. ಆದರೂ ಈ ಸಂಕೀರ್ಣತೆಯನ್ನು ನಿರ್ವಹಿಸುವ ರೀತಿಯು, ಉದಾಹರಣೆಗೆ, ರಾಷ್ಟ್ರೀಯತೆ, ಒಂದು ಸಂಕೀರ್ಣ ಸಂದರ್ಭದಲ್ಲೂ ಸಹಬಾಳ್ವೆ ಮಾಡುವ ರೀತಿ ಇತ್ಯಾದಿಗಳು, ಸ್ವಲ್ಪ ಮಟ್ಟಿಗಾದರೂ ಬಂಡವಾಳಶಾಹಿಗೆ ಋಣಿಯಾಗಿವೆ. ನಾವು ನಮ್ಮ ದೇಶದಲ್ಲಿ ಏನು ಮಾಡುತ್ತೇವೆ ಎಂಬುದನ್ನು ಬಂಡವಾಳಶಾಹಿ ಸಂಪೂರ್ಣವಾಗಿ ವ್ಯಾಖ್ಯಾನಿಸಬಲ್ಲದು ಎಂದಲ್ಲ. ಆದರೆ ಮೇಲೆ ಹೇಳಿದ ಈ ಪ್ರಕ್ರಿಯೆಗಳು ಕೆಲವೊಮ್ಮೆ ಬಂಡವಾಳಶಾಹಿ ವ್ಯವಸ್ಥೆಯ ಒಲವು-ನಿಲುವುಗಳೊಂದಿಗೆ ಒಂದಾದರೆ, ಇನ್ನು ಕೆಲವೊಮ್ಮೆ ಅದಕ್ಕೆ ವಿರುದ್ಧವಾಗಿ ವರ್ತಿಸಬಹುದು. ಇಂತಹ ವ್ಯವಸ್ಥೆಯಲ್ಲಿ ಶಿಕ್ಷಕನಾಗಿರುವ ಒಬ್ಬ ವ್ಯಕ್ತಿಯು ಗುರುಗಳ ಬಗ್ಗೆ ತಾನು ಕೇಳಿದ ಕಥೆಗಳಿಂದ ತನ್ನ ನಂಬಿಕೆ ಮತ್ತು ಅಸ್ಮಿತೆಗಳನ್ನು ಬೆಳೆಸಿಕೊಳ್ಳಬಹುದು ಅಥವಾ ಒಂದು ದೊಡ್ಡ ಅಧಿಕಾರಶಾಹಿ ವ್ಯವಸ್ಥೆಯಲ್ಲಿ ತಾನೂ ಒಬ್ಬ ಸರಕಾರಿ ನೌಕರನೆಂದು ಚಿಂತಿಸಲು ಆತ ಆರಂಭಿಸಬಹುದು. ಇಲ್ಲವೆ, ಬಂಡವಾಳಶಾಹಿ ವ್ಯವಸ್ಥೆಗೆ

ತಕ್ಕ ಉದ್ಯೋಗಿಗಳನ್ನು ಸೃಷ್ಟಿಸುವುದೇ ತನ್ನ ಕೆಲಸ ಎಂದೂ ಆತ ಭಾವಿಸಿಕೊಳ್ಳಬಹುದು ಅಥವಾ ಬಂಡವಾಳಶಾಹಿ ವ್ಯವಸ್ಥೆಯನ್ನು ಬದಲಿಸುವಂಥ ಸಶಕ್ತ ವ್ಯಕ್ತಿಗಳನ್ನು ನಿರ್ಮಾಣ ಮಾಡುವುದೇ ನನ್ನ ಕರ್ತವ್ಯ ಎಂದೂ ಶಿಕ್ಷಕನೊಬ್ಬ ಅಂದುಕೊಳ್ಳಬಹುದು. ಶಿಕ್ಷಕನೊಬ್ಬ ತನ್ನ ವೃತ್ತಿಯನ್ನು ಕುರಿತು ಅಥವಾ ಮಕ್ಕಳು ಹೇಗೆ ತಮ್ಮ ಭವಿಷ್ಯವನ್ನು ಕಲ್ಪಿಸಿಕೊಳ್ಳಲು ಆರಂಭಿಸುತ್ತಾರೆ ಎನ್ನುವುದರ ಕುರಿತು ಆಲೋಚಿಸುವುದರ ಹಿಂದೆ ಆತನ ಮೇಲೆ ಪ್ರಭಾವವನ್ನುಂಟುಮಾಡಿರುವ ಅನೇಕ ಅಂಶಗಳಿರುತ್ತವೆ. ಇವುಗಳಲ್ಲಿ ಬಂಡವಾಳಶಾಹಿಯು ಕೂಡ ಬಹುಮುಖ್ಯವಾದ ಒಂದು ಅಂಶವಾಗಿದ್ದು, ದಿನದಿಂದ ದಿನಕ್ಕೆ ಇದರ ಪಾತ್ರ ಹೆಚ್ಚಾಗುತ್ತಲೇ ಇದೆ.

ಈ ಪ್ರವೃತ್ತಿಯು ಕ್ರಮೇಣ ಬಂಡವಾಳಶಾಹಿ ಸಮಾಜ ಮತ್ತು ದೇಶದ ನಿರ್ಮಾಣಕ್ಕೆ ದಾರಿ ಮಾಡಿಕೊಡಬಹುದು. ಆದರೆ, ಖಡಾಖಂಡಿತವಾಗಿ ಹೀಗೇಯೇ ಆಗುತ್ತದೆಂದು ಹೇಳಲು ಸಾಧ್ಯವಿಲ್ಲ. ಒಂದು ವೇಳೆ, ಬಂಡವಾಳಶಾಹಿ ಸಮಾಜವೇನಾದರೂ ಸೃಷ್ಟಿಯಾದರೆ, ಯಾರ ಕೈಯಲ್ಲಿ ಹಣವಿರುತ್ತದೋ ಅಂತಹವರು ಇಡೀ ಸಮಾಜ ಮತ್ತು ಸಂಸ್ಕೃತಿಯನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಲಿದ್ದಾರೆ. ರಾಜರು ಮತ್ತು ಕೃಷಿಭೂಮಿಯ ಮಾಲೀಕರು ಒಂದು ಸಮಾಜವನ್ನು ಮುನ್ನಡೆಸುವಂತಹ ಸಮಾಜಕ್ಕಿಂತ ಇದು ಬೇರೆ ಬಗೆಯ ಸಮಾಜವಾಗಿರಲಿದೆ. ಏಕೆಂದರೆ, ಸಾಂಪ್ರದಾಯಿಕ ಸಮಾಜದಲ್ಲಿ ಭೂಮಿಯ ಮೇಲಿನ ಒಡೆತನವನ್ನು ವ್ಯಕ್ತಿ ತನ್ನ ಅಧಿಕಾರಬಲದಿಂದ ಸ್ಥಾಪಿಸಿಕೊಳ್ಳುತ್ತಿದ್ದನೇ ವಿನಾ ವ್ಯಾಪಾರ-ವಹಿವಾಟುಗಳಿಂದ ಸಂಪಾದಿಸಿಕೊಳ್ಳುತ್ತಿರಲಿಲ್ಲ. ಅಧಿಕಾರವು ಪೋಷಣೆ ಮತ್ತು ಪ್ರಾಮಾಣಿಕತೆ ಎಂಬ ಸಾಪೇಕ್ಷವಾಗಿ ಸ್ಥಿರವೆನ್ನಬಹುದಾದ ಸಂಬಂಧಗಳನ್ನು ಆಧರಿಸಿರುತ್ತಿತ್ತು. ಬಂಡವಾಳಶಾಹಿ ಸಮಾಜವೊಂದರಲ್ಲಿ ಅಧಿಕಾರವು ಮಾರುಕಟ್ಟೆ ಆಧಾರಿತ ವಿನಿಮಯ ವ್ಯವಹಾರಗಳ ಮೂಲಕ ಗಳಿಸಿದ ಬಂಡವಾಳದಿಂದಲೇ ಹರಿದುಬರುತ್ತದೆ. ಇದನ್ನು ಕೆಲವರು ನ್ಯಾಯಯುತವೆಂದು ಹೇಳಿದರೆ, ಇನ್ನು ಕೆಲವರು ``ಇಂತಹ ವ್ಯವಸ್ಥೆಯಲ್ಲಿ ದುಡ್ಡು ಯಾರ ಕೈಯಲ್ಲಿದೆಯೋ ಅಂತಹವರ ಕಡೆಗೆ ಅಧಿಕಾರ ವಾಲುತ್ತದೆ'' ಎನ್ನುತ್ತಾರೆ.

ಬಂಡವಾಳಶಾಹಿ ವ್ಯವಸ್ಥೆಯು ಶಿಕ್ಷಣವು ಏನು ಮಾಡಬೇಕು ಅಥವಾ ಸಮಾಜದಲ್ಲಿ ಅದರ ಪಾತ್ರವೇನು ಎನ್ನುವಂಥ ಕೆಲವು ಮೂಲಭೂತವಾದ ಪ್ರಶ್ನೆಗಳನ್ನು ಎತ್ತುತ್ತದೆ. ಖ್ಯಾತ ಚಿಂತಕ ಕಾರ್ಲ್ ಮಾರ್ಕ್ಸ್ (1818-1883) ಮಾನವನ ಅಸ್ತಿತ್ವದ ಪ್ರಶ್ನೆಯಲ್ಲಿ ಬಂಡವಾಳಶಾಹಿ ಎಂದರೇನು ಎನ್ನುವುದನ್ನು ಕುರಿತು 19ನೇ ಶತಮಾನದಲ್ಲೇ ವ್ಯಾಖ್ಯಾನಿಸಿದ. ``ದಿನಗಳು ಕಳೆದಂತೆ ಸಮಾಜವು ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳಶಾಹಿ ಪದ್ಧತಿಯ ಕಡೆಗೆ ಚಲಿಸುತ್ತಾ ಹೋಗುತ್ತದೆ,'' ಎಂದು ತನ್ನ ಕಾಲದಲ್ಲಿ ಸಂಭವಿಸಿದ ಪರಿವರ್ತನೆಯನ್ನು ವಿವರಿಸಿದ. ಸ್ಥೂಲವಾಗಿ ಹೇಳುವುದಾದರೆ, ಮಧ್ಯಕಾಲೀನ ಯುಗದಲ್ಲಿ ಭಾರತ, ಚೀನಾ ಮತ್ತು ಪಶ್ಚಿಮ ಯೂರೋಪ್‌ನಲ್ಲಿದ್ದ ಉತ್ಪಾದನಾ ವ್ಯವಸ್ಥೆಯನ್ನು ಊಳಿಗಮಾನ್ಯ ಪದ್ಧತಿ ಎನ್ನಬಹುದು. ಆಗಂತೂ ಹಿಡುವಳಿಯ ಅಂಶವೇ ಸಮಾಜದಲ್ಲಿ ಯಜಮಾನಿಕೆಯನ್ನು ನಡೆಸುತ್ತಿತ್ತು. ಜೊತೆಗೆ, ಹೆಚ್ಚಿನ ಜನರು ಗೇಣಿದಾರರಾಗಿದ್ದರೂ ತಮ್ಮ ಜಮೀನಿನ ನಿಜವಾದ ಒಡೆಯರಿಗೆ ತೋರುವ ನಿಷ್ಠೆಯ ಸಂಕೇತವಾಗಿ ತಮ್ಮ ಗೇಣಿ ಜಮೀನುಗಳಿಗೆ ಅಂಟಿಕೊಂಡಿರುತ್ತಿದ್ದರು. ರಾಜನಾದವನು ತನ್ನ ಬೆಂಬಲಿಗರಿಗೆ ಜಮೀನನ್ನು ಕೊಟ್ಟು ಅದಕ್ಕೆ ಪ್ರತಿಯಾಗಿ ಅವರ ಬೆಂಬಲ ಮತ್ತು ಗೌರವಗಳನ್ನು ನಿರೀಕ್ಷಿಸುತ್ತಿದ್ದನು. ಹೀಗೆ ಜಮೀನು ಪಡೆದುಕೊಂಡು ಉಪಕೃತರಾದವರು ಯುದ್ಧದ ಸಂದರ್ಭಗಳಲ್ಲಿ ರಾಜನಿಗೆ ಯೋಧರು ಮತ್ತು ಶಸ್ತ್ರಾಸ್ತ್ರಗಳನ್ನು ಒದಗಿಸುತ್ತಿದ್ದರಲ್ಲದೆ, ವರ್ಷಕ್ಕೊಮ್ಮೆ ಕಟ್ಟುತ್ತಿದ್ದ ಕಂದಾಯದ ರೂಪದಲ್ಲೂ ಅವನ ಬೊಕ್ಕಸಕ್ಕೆ ಆದಾಯವು ಹರಿದು ಹೋಗುವಂತೆ ಮಾಡುತ್ತಿದ್ದರು. ಮಧ್ಯಕಾಲೀನ ಯುಗದಲ್ಲಿ ಜಗತ್ತಿನ ನಾನಾ ಭಾಗಗಳಲ್ಲಿದ್ದ ಈ ಊಳಿಗಮಾನ್ಯ ಪದ್ಧತಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದಿರಬಹುದು, ನಿಜ. ಆದರೆ, ಇದರ ಪ್ರಧಾನ ಲಕ್ಷಣಗಳು ಒಂದೇ ಆಗಿದ್ದವು. ಅವೆಂದರೆ- ಮಂದಗತಿಯ ಪ್ರಗತಿ, ಕೃಷಿ ಆಧಾರಿತ ಅರ್ಥವ್ಯವಸ್ಥೆ, ಯಜಮಾನಿಕೆಯ ಮೇಲುಗೈ ಇದ್ದಂತಹ

ವೈಯಕ್ತಿಕ ಸಂಬಂಧಗಳ ಮೂಲಕ ಆಳ್ವಿಕೆ ಮತ್ತು ಒಡೆಯ ಹಾಗೂ ಸೇವಕ ಎಂಬ ಭೇದಭಾವ. ಇತರರ ಜಮೀನುಗಳಲ್ಲಿ ಕೆಲಸ ಮಾಡುತ್ತಿದ್ದವರು, ಆಳುಗಳಾಗಿ ದುಡಿಯುತ್ತಿದ್ದವರು, ಗೇಣಿದಾರರಾಗಿದ್ದವರೆಲ್ಲರೂ ಸಾಮಾನ್ಯವಾಗಿ ತಮ್ಮ ಮಾಲೀಕರನ್ನು ಪಿತೃಸಮಾನರಾಗಿ ಕಾಣುತ್ತಿದ್ದರು ಅಥವಾ ತಮ್ಮೆಲ್ಲರ ಧಣಿ ಎಂಬ ಭಾವದಿಂದ ನೋಡುತ್ತಿದ್ದರು. ಆಗ ಚಾಲ್ತಿಯಲ್ಲಿದ್ದ ``ಒಡೆಯ-ಸೇವಕ'' ಅಥವಾ ``ಧಣಿ-ಆಳು'' ಎಂಬಂತಹ ನುಡಿಗಟ್ಟುಗಳು ಊಳಿಗಮಾನ್ಯ ಸಮಾಜದಲ್ಲಿದ್ದ ಕೆಲಸಗಾರ ಮತ್ತು ಆತನ ಯಜಮಾನರ ನಡುವಿನ ಸಂಬಂಧದ ಸ್ವರೂಪಗಳನ್ನು ವ್ಯಕ್ತಪಡಿಸುತ್ತಿದ್ದವು.

ಆದರೆ, ಬಂಡವಾಳಶಾಹಿ ವ್ಯವಸ್ಥೆಯು ಇದಕ್ಕೆ ತದ್ವಿರುದ್ಧವಾಗಿದ್ದು, ಇಲ್ಲಿ ಬಂಡವಾಳವು ಸುಲಭವಾಗಿ ವರ್ಗಾಯಿಸಬಹುದಾದ ಹಣದ ರೂಪದಲ್ಲೇ ಇರುತ್ತದೆಯೇ ವಿನಾ ಭೂಮಿ ರೂಪದಲ್ಲಿರುವುದಿಲ್ಲ. ಇಲ್ಲಿ ಕ್ಷಿಪ್ರ ಗತಿಯಲ್ಲಿ ಬೆಳವಣಿಗೆಯನ್ನು ಸಾಧಿಸಲು ಬಂಡವಾಳವನ್ನು ಹೂಡಲಾಗುತ್ತದೆ. ಅಷ್ಟೇ ಅಲ್ಲ, ಇಲ್ಲಿ ಇದು ನಿರಂತರವಾಗಿ ಚಲನಶೀಲವಾಗಿದ್ದು, ಬಂದ ಲಾಭವನ್ನು ಇನ್ನೊಂದು ಕಡೆ ಮರುಹೂಡಿಕೆ ಮಾಡಲಾಗುತ್ತದೆ. ಈ ಬಗೆಯ ಮರುಹೂಡಿಕೆಯಲ್ಲಿ ಕೂಡ ಮತ್ತಷ್ಟು ಹೆಚ್ಚಿನ ಲಾಭ ಬರುವಂತಹ ಮಾರ್ಗಗಳನ್ನೇ ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಸಂಬಂಧದ ಸ್ವರೂಪವೂ ಇಲ್ಲಿ ಊಳಿಗಮಾನ್ಯ ಪದ್ಧತಿಗೆ ವಿರುದ್ಧವಾಗಿರುತ್ತದೆ. ಅಂದರೆ, ಊಳಿಗಮಾನ್ಯ ಪದ್ಧತಿಯಲ್ಲಿ ಒಂದು ಬಾಂಧವ್ಯವನ್ನು ಸುಲಭವಾಗಿ ಕಿತ್ತೊಗೆಯಲು ಬರುವುದಿಲ್ಲ. ಆದರೆ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಬಂಡವಾಳ ಹೂಡಿದವನ ಹಿತವೇ ಬಹುಮುಖ್ಯವಾಗಿರುವುದರಿಂದ ಇಲ್ಲಿ ಬಾಂಧವ್ಯಕ್ಕೆ ಮಹತ್ತ್ವವಿರುವುದಿಲ್ಲ. ಅಂದರೆ, ಇಲ್ಲಿ ಒಂದು ಬಾಂಧವ್ಯವನ್ನು ಕ್ಷಣಾರ್ಧದಲ್ಲಿ ತುಂಡರಿಸಿಕೊಳ್ಳಲೂಬಹುದು; ಹಾಗೆಯೇ, ಇನ್ನೊಂದು ಅರೆಘಳಿಗೆಯಲ್ಲಿ ಮತ್ತೆ ಅದಕ್ಕೆ ತೇಪೆ ಹಾಕಿಕೊಳ್ಳಲೂಬಹುದು. ಒಟ್ಟಿನಲ್ಲಿ, ಇದೇನನ್ನೇ ಮಾಡಿದರೂ ಅಂತಿಮವಾಗಿ ಅದು ಬಂಡವಾಳಶಾಹಿಯ ಹಿತವನ್ನು ಕಾಪಾಡಬೇಕಷ್ಟೆ. ಊಳಿಗಮಾನ್ಯ ಪದ್ಧತಿಯಲ್ಲಿ ಒಬ್ಬ ಕಾರ್ಮಿಕನಿಗೆ ತನ್ನ ಒಡೆಯನೊಂದಿಗೆ ಹೊಂದಿರುತ್ತಿದ್ದ ಬಾಂಧವ್ಯವು ಜೀವನ್ಮರಣದ ಪ್ರಶ್ನೆಯಾಗಿತ್ತು. ಜೊತೆಗೆ, ಆಗ ಜನರು ಪರಸ್ಪರ ಹೊಂದಿರುತ್ತಿದ್ದ ಬಾಂಧವ್ಯಗಳಲ್ಲಿ ತಾತ್ತ್ವಿಕ ಮತ್ತು ನೈತಿಕ ಅಂಶಗಳ ಲೇಪನವಿರುತ್ತಿತ್ತು. ಆದರೆ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಈ ಬಗೆಯ ಗುಣಲಕ್ಷಣಗಳಿಲ್ಲ. ಇಲ್ಲಿ ಉದ್ಯೋಗಿ ಮತ್ತು ಉದ್ಯೋಗದಾತರ ಸಂಬಂಧಗಳು ಕ್ಷಣಾರ್ಧದಲ್ಲಿ ಸೃಷ್ಟಿಯಾಗುತ್ತವೆ ಮತ್ತು ಅಷ್ಟೇ ಕ್ಷಿಪ್ರಗತಿಯಲ್ಲಿ ಅಂತ್ಯವನ್ನೂ ಕಾಣುತ್ತವೆ. ಈ ವ್ಯವಸ್ಥೆಯಲ್ಲಿ ಹಿಡುವಳಿಯು ಅಥವಾ ಭೂಮಿಯ ಮೇಲಿನ ಒಡೆತನವು ಅಧಿಕಾರದ ಮೂಲವಾಗಿ ಉಳಿದೇ ಇಲ್ಲ. ಬದಲಿಗೆ, ಸಂಪತ್ತಿನ ಕ್ರೋಡೀಕರಣ ಮತ್ತು ಅದನ್ನು ಬಳಸಿಕೊಂಡು ಬೃಹತ್ ಬಂಡವಾಳವನ್ನು ಹೊಂದುವುದೇ ಇಲ್ಲಿ ಅಧಿಕಾರದ ಉಗಮಸ್ಥಾನವಾಗಿದೆ. ಇಲ್ಲಿ ಯಾರ ಬಳಿ ಹೆಚ್ಚು ಹಣ ಬಲವಿದೆಯೋ ಅವರು ಮಾರುಕಟ್ಟೆಯನ್ನು ಚೆನ್ನಾಗಿ ನಿಯಂತ್ರಿಸುತ್ತಾರೆ. ಅಷ್ಟೇ ಅಲ್ಲ, ತಾತ್ತ್ವಿಕವಾಗಿ ಹೇಳುವುದಾದರೆ ಇವರು ಚೆನ್ನಾಗಿ ಉತ್ಪಾದನೆಯನ್ನೂ ಮಾಡುತ್ತಾರೆ. ಊಳಿಗಮಾನ್ಯ ವ್ಯವಸ್ಥೆಯಲ್ಲಿ ವಿಧೇಯತೆಯೇ ಅತಿಶಯವಾದ ಗುಣವಾಗಿದ್ದರೆ, ಬಂಡವಾಳಶಾಹಿ ಪದ್ಧತಿಯಲ್ಲಿ ಆದಷ್ಟೂ ಕಡಿಮೆ ವೇತನಕ್ಕೆ ದಕ್ಷತೆಯಿಂದ ದುಡಿಯುವುದೇ ಅತಿಶಯವಾದ ಗುಣವಾಗಿದೆ. ಯಾವುದೇ ಒಂದು ಸಮಸ್ಯೆಯನ್ನು ಪರಿಹರಿಸಲು ಎಷ್ಟು ಪ್ರಯತ್ನ ಹಾಕಬೇಕು ಮತ್ತು ಎಷ್ಟು ಕಡಿಮೆ ಖರ್ಚಿನಲ್ಲಿ ಇದಕ್ಕೆ ಪರಿಹಾರವನ್ನು ಕಂಡುಹಿಡಿಯಬಹುದು ಎಂದು ಲೆಕ್ಕಾಚಾರ ಹಾಕುವುದೇ ಬಂಡವಾಳಶಾಹಿ ವ್ಯವಸ್ಥೆಯು ಬಯಸುವ ಬಹುಮುಖ್ಯ ಲಕ್ಷಣವಾಗಿದೆ. ಊಳಿಗಮಾನ್ಯ ವ್ಯವಸ್ಥೆ ಮತ್ತು ಬಂಡವಾಳಶಾಹಿ ಪದ್ಧತಿಯ ನಡುವೆ ನಿರ್ಣಾಯಕವಾದಂತಹ ವ್ಯತ್ಯಾಸವನ್ನು ಉಂಟುಮಾಡಿರುವುದೆಂದರೆ, ಬಾಂಧವ್ಯದ ಸ್ವರೂಪವೇ ಆಗಿದೆ. ಇಷ್ಟೇ ಅಲ್ಲ, ಬಂಡವಾಳಶಾಹಿ ವ್ಯವಸ್ಥೆಯು ಬಯಸುವಂತಹ ಬಾಂಧವ್ಯಗಳು ದಿನದಿಂದ ದಿನಕ್ಕೆ ವ್ಯಾಪಕವಾಗುತ್ತಿವೆ. ಊಳಿಗಮಾನ್ಯ ಪದ್ಧತಿಯಲ್ಲಿ ಕೆಲಸಗಾರನೊಬ್ಬನು ನೈತಿಕ ನಿಷ್ಠೆಯಿಂದ ಮತ್ತು ವಿಧೇಯತೆಯಿಂದ ತನ್ನ ಧಣಿಯ

ಶ್ರೇಯಸ್ಸಿಗಾಗಿ ದುಡಿಯಬೇಕಾಗಿತ್ತು. ಈ ಬಾಂಧವ್ಯದಲ್ಲಿ ಒಡೆಯನಾಗಿದ್ದವನು ಎಷ್ಟೋ ಸಲ ಕೆಲಸಗಾರನ ಮೇಲೆ ದೈಹಿಕ ದೌರ್ಜನ್ಯವನ್ನೂ ಎಸಗುತ್ತಿದ್ದ. ಆದರೆ, ಬಂಡವಾಳಶಾಹಿ ಪದ್ಧತಿಯಲ್ಲಿ ಒಂದು ಬಗೆಯ ಖರೀದಿ ಮತ್ತು ಮಾರಾಟ ಪ್ರಜ್ಞೆಯಿರುವ ಗುತ್ತಿಗೆಯ ಮೂಲಕ ಬಂಡವಳಶಾಹಿಯೊಬ್ಬನಿಗಾಗಿ ದುಡಿಯುತ್ತಿದ್ದರೂ ಇಲ್ಲಿ ಅವನಿಗೆ ಹಣದ ಪ್ರತಿಫಲವಿರುತ್ತದೆ. ಜೊತೆಗೆ, ಈ ಬಾಂಧವ್ಯದಲ್ಲಿ ಕೆಲಸಗಾರನಿಗೆ ಮಾರುಕಟ್ಟೆಯ ಏರಿಳಿತಗಳು ಮತ್ತು ನಿರುದ್ಯೋಗದ ಭಯವೂ ಕಾಡುತ್ತಿರುತ್ತದೆ. ಇದರ ಜತೆಗೆ, ಉತ್ಪಾದನೆಗೆ ಸಂಬಂಧಿಸಿದಂತೆ ಇನ್ನೂ ಹೊಸ ಬಗೆಯ ಸಂಬಂಧಗಳು ಇಲ್ಲುಂಟು. ಉದಾಹರಣೆಗೆ ಹೇಳುವುದಾದರೆ, ಖಾಸಗಿ ಆಸ್ತಿಯನ್ನು ಹೊಂದುವುದು. ಇಲ್ಲಿ ವ್ಯಕ್ತಿಯೊಬ್ಬ ಇಡೀ ಕಾರ್ಖಾನೆಯ ಒಡೆತನವನ್ನು ತಾನೇ ಹೊಂದಬಹುದು ಮತ್ತು ಅಲ್ಲಿ ತಯಾರಾಗುವ ಉತ್ಪನ್ನಗಳ ಮೇಲೂ ತಾನೇ ಸ್ವಾಮ್ಯವನ್ನು ಸ್ಥಾಪಿಸಿಕೊಳ್ಳಬಹುದು.

ಬಂಡವಾಳಶಾಹಿಯ ಬೆಳವಣಿಗೆಯು ಸಮಾಜದಲ್ಲಿನ ಬಾಂಧವ್ಯಗಳಲ್ಲಿ ದೊಡ್ಡ ಪಲ್ಲಟಗಳನ್ನು ಉಂಟುಮಾಡುವಲ್ಲಿ ಬಹುಮುಖ್ಯವಾದ ಕಾಣಿಕೆಯನ್ನು ನೀಡುತ್ತಿದೆ. ಬಂಡವಾಳಶಾಹಿ ಎಂದರೇನೆಂದರೆ, ಮಾರುಕಟ್ಟೆ ಆಧಾರಿತ ಸಂಬಂಧಗಳ ಮೂಲಕ ಮತ್ತಷ್ಟು, ಮಗದಷ್ಟು ಹಣವನ್ನು ಸಂಪಾದನೆ ಮಾಡುವುದಷ್ಟೆ. ಇಲ್ಲಿ ಬಂಡವಾಳವು ಅಮೂರ್ತವಾದುದು, ಅಂತರ್ಗತಿಸಿಕೊಳ್ಳದ ರೀತಿಯದ್ದು.

ಸಾಮಾಜಿಕ ಬದಲಾವಣೆಯು ಅಥವಾ ಪರಿವರ್ತನೆಯು ಇಂತಹ ಹಲವು ಪ್ರಶ್ನೆಗಳನ್ನು ಹುಟ್ಟಿಹಾಕಲಿದ್ದು, ಶಿಕ್ಷಣದ ಗುರಿ ಮತ್ತು ವಸ್ತು ವಿಷಯದ ಬಗ್ಗೆ ಅನೇಕ ಪ್ರಶ್ನೆಗಳನ್ನು ಎತ್ತುತ್ತದೆ. ಉದಾಹರಣೆಗೆ ಹೇಳುವುದಾದರೆ, ರಾಜರು ಮತ್ತು ಅವರ ವೈಭವವನ್ನೇ ಹಾಡಿ ಹೊಗಳುವಂಥ ಶಿಕ್ಷಣವು ಎಂದಿಗೂ ಊಳಿಗಮಾನ್ಯ ಸಂಸ್ಕೃತಿಯನ್ನೇ ಕಲಿಸುತ್ತದೆ, ಸಾಮಾನ್ಯರು ತಮ್ಮ ರಾಜರಿಗೆ ವಿಧೇಯರಾಗಿರುವುದನ್ನು ಅಭ್ಯಾಸ ಮಾಡಿಸುತ್ತದೆ ಎಂದು ಕಾರ್ಲ್ ಮಾರ್ಕ್ಸ್ ಹೇಳಿದ್ದಾನೆ. ಆದರೆ, ಬಂಡವಾಳಶಾಹಿ ಯುಗದಲ್ಲಿ, ತಂತ್ರಜ್ಞಾನವು ಹೇಗೆ ಹಲವಾರು ಬಗೆಯ ಹೊಸ ಸಾಮಾಜಿಕ ಸಂಬಂಧಗಳನ್ನು ಕೆಡವಿ ಮತ್ತೆ ಕಟ್ಟುತ್ತಿದೆ ಎನ್ನುವುದೇ ಪ್ರಸ್ತುತವಾದ ವಿಚಾರವಾಗಿದೆ. ಇದರ ಜತೆಗೆ, ಹೊಸ ಬಗೆಯ ಉತ್ಪಾದಕ ಶಕ್ತಿಗಳು ಮತ್ತು ಪ್ರವರ್ಧಮಾನಕ್ಕೆ ಬರುತ್ತಿರುವ ಔದ್ಯಮಿಕ ಸಾಮ್ರಾಜ್ಯಗಳು ಹೇಗೆ ಇಡೀ ವಿಶ್ವದಲ್ಲೇ ಅತ್ಯಂತ ಶಕ್ತಿಶಾಲಿ ಸಂಸ್ಥೆಗಳಾಗಿವೆ ಎನ್ನುವುದನ್ನು ಕೂಡ ಇದು ಚರ್ಚಿಸುತ್ತದೆ.

ಸಮಾಜದಲ್ಲಿ ಕಾಣಿಸಿಕೊಳ್ಳುತ್ತಿರುವ ಬದಲಾವಣೆಗಳನ್ನು ನಾವು ಹೇಗೆ ಅರ್ಥ ಮಾಡಿಕೊಂಡಿದ್ದೇವೆ ಎನ್ನುವುದನ್ನು ಶಿಕ್ಷಣಕ್ರಮ ತಿಳಿಸಬೇಕಾಗುತ್ತದೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಇರುವ ಇನ್ನೊಂದು ಬಗೆಯ ಪ್ರಶ್ನೆಯೇನೆಂದರೆ, ನಾವು ಬಂಡವಾಳಶಾಹಿ ವ್ಯವಸ್ಥೆಯಲ್ಲೂ ಇರುವ ತೊಂದರೆಗಳನ್ನು ಪ್ರಶ್ನಿಸದೆಯೇ ಮಕ್ಕಳಿಗೆ ಪಾಠ ಮಾಡಬೇಕೇ ಅಥವಾ ಬಂಡವಾಳಶಾಹಿ ವ್ಯವಸ್ಥೆಯ ತೊಂದರೆಗಳನ್ನು ಸಹ ವಿವರಿಸಬೇಕೇ ಅಥವಾ ಬಂಡವಾಳಶಾಹಿ ವ್ಯವಸ್ಥೆಯ ಸಮಸ್ಯೆಗಳನ್ನು ಬಗೆಹರಿಸಬಲ್ಲ ಬಂಡವಾಳಶಾಹಿ ವ್ಯವಸ್ಥೆಯನ್ನು ಮೀರಿದ ಸಂಸ್ಕೃತಿಗಳ ಬಗ್ಗೆ ಬೋಧನೆಯಲ್ಲಿ ತಿಳಿಸಬೇಕೇ ಎನ್ನುವುದಾಗಿದೆ. ಉದಾಹರಣೆಗೆ ಹೇಳುವುದಾದರೆ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸ್ಪರ್ಧೆ ಎನ್ನುವುದು ಕಾರ್ಮಿಕನೊಬ್ಬನ ಬದುಕಿನ ಭಾಗವೇ ಆಗಿರುತ್ತದೆ. ಈ ಸ್ಪರ್ಧಾಗುಣವನ್ನು ನಾವು ಶಾಲೆಗಳಲ್ಲೂ ಸಂಭ್ರಮಿಸಬೇಕೇ ಅಥವಾ ಸಂಘಟಿತವಾದ ಸಂಕೀರ್ಣ ಸಮಾಜಗಳಲ್ಲಿ ಅಥವಾ ನಮ್ಮ ಕಾಲದಲ್ಲಿ ತುಂಬಾ ಸಂಕೀರ್ಣವಾಗಿರುವ ಉತ್ಪಾದನಾ ವ್ಯವಸ್ಥೆಯಲ್ಲಿ ದಿನದಿಂದ ದಿನಕ್ಕೆ ಹೆಚ್ಚು ಮುಖ್ಯವೆನಿಸುತ್ತಿರುವ ಸಹಕಾರ ಗುಣವನ್ನು ನಾವು ಶಾಲೆಗಳಲ್ಲಿ ಮಕ್ಕಳಿಗೆ ರೂಢಿಸಬೇಕೇ ಎನ್ನುವುದು ಇಲ್ಲಿನ ಪ್ರಶ್ನೆಯಾಗಿದೆ. ಬಂಡವಾಳಶಾಹಿ ವ್ಯವಸ್ಥೆ ಸೃಷ್ಟಿಸಿರುವ ಶೋಷಣೆ

ಮತ್ತು ನೋವನ್ನು ಮೀರಬೇಕೆಂದರೆ, ಸಹಕಾರವು ಅತ್ಯಂತ ಮುಖ್ಯವಾಗಿದೆ. ಶಿಕ್ಷಣದ ವಿಷಯಕ್ಕೆ ಸಂಬಂಧಿಸಿದಂತೆ ಸಮಾಜಶಾಸ್ತ್ರಜ್ಞರು ಎತ್ತುವ ಪ್ರಶ್ನೆಗಳಲ್ಲಿ ಈ ಸ್ಪರ್ಧಾಮೌಲ್ಯ ಮತ್ತು ಸಹಕಾರ ಮೌಲ್ಯಗಳ ನಡುವೆ ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು ಎನ್ನುವುದು ಯಾವಾಗಲೂ ಬರುವಂತಹುದೇ ಆಗಿದೆ. ಚಿಕ್ಕ ಮಕ್ಕಳಾಗಲಿ ವಯಸ್ಕರಾಗಲಿ, ಸ್ಪರ್ಧಾಗುಣವನ್ನು, ಸಹಕಾರ ಗುಣವನ್ನು ತಾವಾಗಿಯೇ ಕಲಿಯುವುದಿಲ್ಲ. ಬದಲಾಗಿ, ಪ್ರತಿಯೊಬ್ಬರೂ ಈ ಗುಣಗಳನ್ನು ಶಾಲೆಗಳಲ್ಲಿ ಮತ್ತು ಸಮಾಜ ಕಲಿಸುವುದನ್ನು ಮೈಗೂಡಿಸಿಕೊಳ್ಳುತ್ತಾರೆ. ಭಾರತೀಯ ಶಿಕ್ಷಣ ವ್ಯವಸ್ಥೆಯು ಇವೆರಡರಲ್ಲಿ ಯಾವುದಕ್ಕೆ ಒತ್ತು ನೀಡಬೇಕು?

ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳಶಾಹಿ ಉತ್ಪಾದನಾ ಪದ್ಧತಿಯ ಕಡೆಗೆ ಹೊರಳಿಕೊಳ್ಳುವ ಪರಿವರ್ತನೆಯ ವಿವೇಚನೆಯು ಈ ಕಾಲಘಟ್ಟದ ಹಲವು ಧರ್ಮಸಂಕಟಗಳ ಪೈಕಿ ಒಂದಾಗಿದೆ. ಹಿಂದಿನ ಕಾಲಘಟ್ಟದಲ್ಲಿ ನಮ್ಮ ಸಮಾಜವು ನಮಗೆ ಹೇಳಿಕೊಡುವ ಸಾಂಸ್ಕೃತಿಕ ಮೌಲ್ಯಗಳನ್ನು ಕಲಿತುಕೊಳ್ಳುವಂತೆ ಪ್ರೋತ್ಸಾಹಿಸಲಾಗುತ್ತಿತ್ತು. ಆಗೆಲ್ಲ ಪ್ರತಿಯೊಬ್ಬರಿಗೂ ಪವಿತ್ರ ಗ್ರಂಥಗಳನ್ನು, ಕಾವ್ಯಗಳನ್ನು ಮತ್ತು ಸಾಹಿತ್ಯವನ್ನು ಅವು ಎತ್ತಿ ಹಿಡಿಯುವ ಉದಾತ್ತ ಮೌಲ್ಯಗಳ ಸಲುವಾಗಿ ಅಭ್ಯಾಸ ಮಾಡಿಸಲಾಗುತ್ತಿತ್ತು. ಎಷ್ಟೋ ಸಲ ಈ ಚಿಂತನೆಗಳೇ ಊಳಿಗಮಾನ್ಯ ವ್ಯವಸ್ಥೆಯಲ್ಲಿನ ಸಾಮಾಜಿಕ ಸಂಬಂಧಗಳಿಗೆ ಜೀವಾಧಾರಗಳಾಗಿದ್ದವು. ಊಳಿಗಮಾನ್ಯ ಮೌಲ್ಯಗಳೆಲ್ಲವೂ ನಮಗೆ ಸರಿ ಎನಿಸುವಂತೆ ಕಾಣಿಸುತ್ತಿದ್ದವು. ರಾಮಾಯಣ ಮಹಾಕಾವ್ಯದಲ್ಲಿ ತಂದೆಗೆ ತಕ್ಕ ಮಗನೆನಿಸಿಕೊಂಡಿರುವವನೇ ಆ ಸಾಮ್ರಾಜ್ಯದ ರಾಜನೂ ಆಗಿರುವುದು ಕಾಕತಾಳೀಯವೇನಲ್ಲ. ಆದರೆ, ಬಂಡವಾಳಶಾಹಿ ಯುಗದಲ್ಲಿ ಜ್ಞಾನವನ್ನು ಅದು ತರಬಹುದಾದ ವ್ಯಾವಹಾರಿಕ ಲಾಭದ ಮಾನದಂಡದಿಂದ ಅಳೆಯಲಾಗುತ್ತದೆಯೇ ವಿನಾ ಅದು ನಮ್ಮಲ್ಲಿ ರೂಢಿಸುವ ಶ್ರೇಷ್ಠತೆಯನ್ನು ಪರಿಗಣಿಸುವುದಿಲ್ಲ. ಈ ಗುಣಗಳೇ ಹೊಸ ವ್ಯವಸ್ಥೆಯಲ್ಲಿ ಶಕ್ತಿಶಾಲಿಗಳಾಗಿವೆ. ಹೀಗಾಗಿ ಇಲ್ಲಿ ಯಾವುದೋ ಎಂಬಿಎ ಡಿಗ್ರಿ ಪಡೆದವನೋ, ಇನ್ನೊಬ್ಬ ದೊಡ್ಡ ಬಂಡವಾಳಶಾಹಿಯೋ ಆದರ್ಶವ್ಯಕ್ತಿ, ಅಂದರೆ ಮರ್ಯಾದಾ ಪುರುಷೋತ್ತಮನಾಗಿ ಬಿಡುತ್ತಾನೆ.

ಬಂಡವಾಳಶಾಹಿ ಉತ್ಪಾದನಾ ಪದ್ಧತಿಯ ಸೃಷ್ಟಿಗೆ ಕಾರಣವಾಗುವ ರಚನೆಗಳನ್ನು ಅರಿತುಕೊಳ್ಳುವುದೇ ಬಹುಮುಖ್ಯವಾದ ಸವಾಲಾಗಿದೆ. ಅದರಲ್ಲೂ, ಯಾವ ಬಗೆಯ ಸಾಮಾಜಿಕ ವ್ಯವಸ್ಥೆಯು ಮನುಷ್ಯನ ಸ್ವಾತಂತ್ರ್ಯಕ್ಕೆ ಉತ್ತೇಜನ ನೀಡುತ್ತದೆ ಎನ್ನುವುದು ತುಂಬಾ ಮುಖ್ಯ. ಸಂಪೂರ್ಣ ಸ್ವತಂತ್ರ ಜೀವನವನ್ನು ನಡೆಸುವ ಮತ್ತು ಪೂರ್ಣಪ್ರಮಾಣದಲ್ಲಿ ಜೀವನವನ್ನು ಅನುಭವಿಸುವ ಭರವಸೆಯನ್ನು ಪೂರೈಸುವುದೇ ಶಿಕ್ಷಣದ ಮುಖ್ಯ ಉದ್ದೇಶವಾಗಿದ್ದಲ್ಲಿ ಬಂಡವಾಳಶಾಹಿ ವ್ಯವಸ್ಥೆಯೊಳಗಿರುವ ಒತ್ತಡಗಳು ಮತ್ತು ವಿರೋಧಾಭಾಸಗಳು ಎಂಥವು ಮತ್ತು ಭವಿಷ್ಯದಲ್ಲಿ ಇವುಗಳನ್ನು ಹೇಗೆ ಮೆಟ್ಟಿ ನಿಲ್ಲಬಹುದು ಎನ್ನುವ ಪ್ರಶ್ನೆ ಮುಖ್ಯವಾಗುತ್ತದೆ.

ಬಹುತೇಕ ತತ್ತ್ವಜ್ಞಾನಿಗಳಂತೆಯೇ ಕಾರ್ಲ್ ಮಾರ್ಕ್ಸ್ ಕೂಡ, ಪ್ರತಿಯೊಂದು ಸಂಗತಿಯೂ ಕಾಲಕ್ರಮೇಣ ಬದಲಾಗುತ್ತದೆ ಎಂದು ನಂಬಿದ್ದ. ಅದರಲ್ಲೂ ``ಪ್ರತಿಯೊಂದು ಸಮಾಜವೂ ತನ್ನ ಒಡಲಲ್ಲೇ ಬದಲಾವಣೆಯ ಬೀಜಗಳನ್ನು ಹುದುಗಿಸಿಕೊಂಡಿರುತ್ತದೆ,'' ಎನ್ನುವ ಅವನ ಮಾತು ತುಂಬಾ ಪ್ರಸಿದ್ಧವಾದುದು. ಒಂದು ಬಗೆಯ ಉತ್ಪಾದನಾ ಪದ್ಧತಿಯಿಂದ ಇನ್ನೊಂದು ಬಗೆಯ ಉತ್ಪಾದನಾ ಪದ್ಧತಿಗೆ ಹೊರಳಿಕೊಳ್ಳುವುದು ತುಂಬಾ ನಿಧಾನವಾಗಿ ನಡೆಯುವ ಮತ್ತು ಅಪಾರವಾದ ನೋವಿನಿಂದ ಕೂಡಿರುವ, ನೂರಾರು ವರ್ಷಗಳನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಾಗಿದೆ. ಆತನ ಪ್ರಕಾರ ಜಗತ್ತಿನ ಪ್ರತಿಯೊಂದು ಸಮಾಜದ ಆಂತರ್ಯದಲ್ಲೂ ಕೆಲವು ವಿರೋಧಾಭಾಸಗಳು ಮತ್ತು ಕೆಲವು ಸಂಘರ್ಷಗಳು ಇದ್ದೇ ಇರುತ್ತವೆ. ಈ ವಿರೋಧಾಭಾಸಗಳು ಅಥವಾ ಸಂಘರ್ಷಗಳು ಹಲವು ತಲೆಮಾರುಗಳವರೆಗೆ ಅಥವಾ ಶತಶತಮಾನಗಳ ಕಾಲ ಹೊಗೆಯಾಡುತ್ತಿರಬಹುದು. ಆದರೆ,

ಅಂತಿಮವಾಗಿ ಇದು ಸಮಾಜದಲ್ಲಿರುವ ಶಕ್ತಿಗಳ ಧ್ರುವೀಕರಣಕ್ಕೆ ದಾರಿ ಮಾಡಿಕೊಡುತ್ತದಲ್ಲದೆ, ಇದರ ಮೂಲಕ ಹೊಸ ಬಗೆಯ ಸಮಾಜ ಸೃಷ್ಟಿಯಾಗುತ್ತದೆ, ಎಂದು ಅವನು ಪ್ರತಿಪಾದಿಸಿದ್ದಾನೆ.

ಊಳಿಗಮಾನ್ಯ ವ್ಯವಸ್ಥೆಯಲ್ಲಿ ಅದರೊಳಗೇ ಇರುವ ಜಮೀನಿನ ಮಾಲೀಕರು, ಅದರಲ್ಲಿನ ವ್ಯಾಪಾರ ವಹಿವಾಟು ವರ್ಗಗಳ ಮೂಲಕವೇ ವಿರೋಧಾಭಾಸ ಹುಟ್ಟಿಕೊಂಡಿತು ಎಂದು ಕಾರ್ಲ್ ಮಾರ್ಕ್ಸ್ ಹೇಳಿದ್ದಾನೆ. ಈ ವ್ಯವಸ್ಥೆಯು ತೀರಾ ಮಂದಗತಿಯ ಚಲನಶೀಲತೆಯನ್ನು ಹೊಂದಿದ್ದು, ಅಲ್ಲಿರುವ ಸಂಪನ್ಮೂಲಗಳನ್ನೆಲ್ಲ ಊಳಿಗಮಾನ್ಯ ಮೇಲ್ವರ್ಗದವರೇ ನಿಯಂತ್ರಿಸುತ್ತಿರುತ್ತಾರೆ. ಅಲ್ಲದೆ, ಆ ಸಂಪನ್ಮೂಲಗಳನ್ನೆಲ್ಲ ಅವರು ತಮ್ಮ ಐಷಾರಾಮಿ ಜೀವನಶೈಲಿಗೆ ಮತ್ತು ರಾಜಕೀಯ ಶಕ್ತಿಯ ಪ್ರದರ್ಶನಕ್ಕೆ ಹಾಗೂ ಆಡಂಬರಕ್ಕೆ ಬಳಸಿಕೊಳ್ಳುತ್ತಾರೆ. ಆದರೆ, ಬಂಡವಾಳಶಾಹಿ ಆಧಾರಿತ ವ್ಯವಸ್ಥೆ ಇದಕ್ಕೆ ತದ್ವಿರುದ್ಧವಾಗಿರುತ್ತದೆ. ಅಂದರೆ, ಇಲ್ಲಿ ವಾಣಿಜ್ಯ ವಹಿವಾಟು ನಡೆಸುವವರೆಲ್ಲರೂ ಬಂಡವಾಳ ಸುರಿದು, ಅದರಿಂದ ಮೇಲೆ ಬರುತ್ತಾರೆಯೇ ವಿನಾ ಅವರಿಗೆ ರಾಜಕೀಯ ಶಕ್ತಿಯಲ್ಲಾಗಲಿ, ಸಾಂಸ್ಕೃತಿಕ ಸ್ಥಾನಮಾನದಲ್ಲಾಗಲಿ ಆಸಕ್ತಿ ಇರುವುದಿಲ್ಲ. ಇಲ್ಲಿ, ಅಪಾರವಾದ ಲಾಭದ ನಿರೀಕ್ಷೆ ಇಟ್ಟುಕೊಂಡು ತುಂಬಾ ಎಚ್ಚರಿಕೆಯಿಂದ ಬಂಡವಾಳವನ್ನು ಹೂಡಲಾಗುತ್ತದೆ. ಆನಂತರ, ಮತ್ತಷ್ಟು ಲಾಭವನ್ನು ಗಳಿಸುವ ಉದ್ದೇಶದಿಂದ ಈ ಲಾಭವನ್ನು ಪುನಃ ಬಂಡವಾಳವಾಗಿ ವಿನಿಯೋಗಿಸಲಾಗುತ್ತದೆ. ಒಟ್ಟಿನಲ್ಲಿ, ಇಲ್ಲಿ ಹಣವನ್ನು ತುಂಬಾ ಎಚ್ಚರಿಕೆಯಿಂದ ಬಳಸಲಾಗುತ್ತದೆ. ಜೊತೆಗೆ, ಸರಳತೆ ಮತ್ತು ಶಿಸ್ತಿನಿಂದ ಕೂಡಿದ ಜೀವನಶೈಲಿಯು ಬಂಡವಾಳದ ಜೊತೆಗೆ ಬಂಡವಾಳಶಾಹಿಯ ಪ್ರಗತಿಗೆ ಕಾರಣವಾಗುತ್ತದೆ. ಬಂಡವಾಳಶಾಹಿಗಳು ಸಂಪನ್ಮೂಲಗಳ ಬಗ್ಗೆ ಹೊಂದಿರುವ ಈ ಧೋರಣೆಯು ಕ್ರಮೇಣ ಹೆಚ್ಚುಹೆಚ್ಚು ಉತ್ಪಾದನೆಯಲ್ಲಿ ತೊಡಗುವಂತೆ ಉತ್ಪಾದಕ ಶಕ್ತಿಗಳನ್ನು ಒತ್ತಾಯಿಸುತ್ತದೆ. ಆದರೆ, ಇದೆಲ್ಲಕ್ಕೂ ಬಂಡವಾಳ ಹೂಡಿಕೆಯೇ ಆಧಾರವಾಗಿರುತ್ತದೆ. ಒಂದು ಕಾಲದಲ್ಲಿ –ಅಂದರೆ, ಊಳಿಗಮಾನ್ಯ ಪದ್ಧತಿಯ ಕಾಲದಲ್ಲಿ- ಪ್ರಾಣಿಗಳು ಮತ್ತು ಮನುಷ್ಯರನ್ನು ಬಳಸಿಕೊಂಡೇ ಎಲ್ಲವನ್ನೂ ಉತ್ಪಾದಿಸಲಾಗುತ್ತಿತ್ತು. ಆದರೆ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಈ ಜಾಗದಲ್ಲಿ ಯಂತ್ರಗಳು ಬಂದವು, ಕ್ರಮೇಣ ಸಾಂಪ್ರದಾಯಿಕ ಇಂಧನಗಳು, ತದನಂತರ ವಿದ್ಯುಚ್ಛಕ್ತಿ ಬಂದಿತು. ಉತ್ತಮೋತ್ತಮವಾದ ಮತ್ತು ಪರಿಣಾಮಕಾರಿಯಾದ ಸಾಧನಗಳ ಆವಿಷ್ಕಾರದ ಪರಿಣಾಮವಾಗಿ ಉತ್ಪಾದನಾ ವಿಧಾನವು ನಿರಂತರವಾಗಿ ಬದಲಾಗತೊಡಗಿತು. ಹೀಗೆ ಕೃಷಿಭೂಮಿ ಮತ್ತು ಪ್ರಾಣಿಗಳೇ ಪ್ರಮುಖ ಉತ್ಪಾದನಾ ಸಾಧನಗಳಾಗಿದ್ದ ಪದ್ಧತಿ ಕಣ್ಮರೆಯಾಗಿ ಆ ಜಾಗದಲ್ಲಿ ಯಂತ್ರೋಪಕರಣಗಳು ಮತ್ತು ಕೈಗಾರಿಕೆಗಳು ಕಾಣಿಸಿಕೊಂಡವು.

ಬಂಡವಾಳಶಾಹಿ ಮಾದರಿಯ ಉತ್ಪಾದಕತೆಯೂ ಕ್ರಮೇಣ ಗುಣಮಟ್ಟವನ್ನು ಆಧರಿಸಿದ ವಿಭಿನ್ನ ಬಗೆಯ ಉತ್ಪಾದನೆಯ ವಿಧಾನವನ್ನು ಅದು ಜಾರಿಗೆ ತರಬಲ್ಲ ಬೀಜಗಳನ್ನು ತನ್ನಲ್ಲೇ ಹುದುಗಿಸಿಕೊಂಡಿರುತ್ತದೆ ಎಂದು ನಿರೀಕ್ಷಿಸಬಹುದು. ಈ ಪ್ರಶ್ನೆಯನ್ನು ಪರಿಹರಿಸಬೇಕೆಂದರೆ, ನಾವು ಬಂಡವಾಳಶಾಹಿ ವ್ಯವಸ್ಥೆಯೊಳಗೇ ಇರುವ ವಿರೋಧಾಭಾಸಗಳು ಯಾವುವು ಎಂಬುದನ್ನು ನೋಡಬೇಕು. ಹಾಗಾದರೆ, ಈ ಸಮಾಜ ಹೇಗೆ ಬದಲಾಗುತ್ತಿದೆ ಮತ್ತು ಅದು ಯಾವ ದಿಕ್ಕಿನತ್ತ ಹೋಗುತ್ತಿದೆ?

**ಪರಕೀಯ ಭಾವನೆ (ALIENATION)**

ಕಾರ್ಲ್ ಮಾರ್ಕ್ಸ್ ಪ್ರಕಾರ ``ಪರಕೀಯ ಭಾವನೆಯು ಬಂಡವಾಳಶಾಹಿ ಆಧಾರಿತ ಸಮಾಜಗಳಲ್ಲಿನ ಬಹುಮುಖ್ಯ ವಿರೋಧಾಭಾಸವಾಗಿದೆ. ಇದೇ ಇಲ್ಲಿನ ಅತೃಪ್ತಿಯ ಮೂಲವಾಗಿದೆ. ಅಂದರೆ, ಇಲ್ಲಿ ಯಾರೊಬ್ಬರಿಗೂ ತಾವು ಮಾಡುವ ಕೆಲಸವು ಸಂತೃಪ್ತಿಯನ್ನು ತಂದುಕೊಡುವುದಿಲ್ಲ.'' ಆದರೆ, ಒಬ್ಬ ರೈತನಿಗೆ ಇಂತಹ ಅತೃಪ್ತಿ ಕಾಡುವುದಿಲ್ಲ.

ಅವನು ತನ್ನ ಹೊಲದಲ್ಲಿ ಹೊಂಬಣ್ಣದಿಂದ ಕಂಗೊಳಿಸುವ ಗೋಧಿಯನ್ನು ಬೆಳೆದಿದ್ದಾನೆ ಎಂದುಕೊಳ್ಳಿ. ಹಲವು ತಿಂಗಳುಗಳ ತನ್ನ ಶ್ರಮದಿಂದ ಒಳ್ಳೆಯ ಬೆಳೆ ಬಂದಿರುವುದನ್ನು ನೋಡಿದಾಗ ಅವನು ಸಂತೋಷದಿಂದ ಹಿಗ್ಗುತ್ತಾನೆ. ಅವನಿಗಾಗುವ ಈ ಆನಂದವನ್ನು ಪದಗಳಲ್ಲಿ ಹೇಳುವುದು ಸಾಧ್ಯವಿಲ್ಲ. ಆದರೆ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಇಂತಹ ಆನಂದಾತಿಶಯವನ್ನು ಯಾರೂ ಅನುಭವಿಸಲಾರರು. ಉದಾಹರಣೆಗೆ ಹೇಳುವುದಾದರೆ, ಒಬ್ಬ ವ್ಯಕ್ತಿಯು ಒಂದು ದೊಡ್ಡ ಸಾಫ್ಟ್‌ವೇರ್ ಕಂಪನಿಯಲ್ಲಿರುವ ಬಹುದೊಡ್ಡ ತಂಡದ ಭಾಗವಾಗಿದ್ದಾನೆ ಎಂದಿಟ್ಟುಕೊಳ್ಳಿ. ಈ ತಂಡವು ಮಾಡುತ್ತಿರುವ ತುಂಬಾ ದೊಡ್ಡದಾದ ಸಂಕೀರ್ಣವಾದ ಕೆಲಸದ ಸದಸ್ಯನಾಗಿರುವವನು ಅದರಲ್ಲಿ ಯಾವುದೋ ಒಂದು ತೀರಾ ಸಣ್ಣ ಕೆಲಸವನ್ನು ಮಾಡುತ್ತಿರಬಹುದಷ್ಟೆ. ಇಷ್ಟೇ ಅಲ್ಲ, ಈ ವ್ಯಕ್ತಿಗೆ ``ನಮ್ಮ ತಂಡವು ಏನನ್ನು ಮಾಡುತ್ತಿದೆ ಮತ್ತು ಅದಕ್ಕೆ ನೀವು ಏನೇನು ಮಾಡಬೇಕು,'' ಎನ್ನುವುದನ್ನು ಸ್ಪಷ್ಟವಾಗಿ ಹೇಳಲಾಗಿರುತ್ತದೆ. ಹೀಗಾಗಿ, ಒಂದು ದೊಡ್ಡ ತಂಡದಲ್ಲಿರುವ ಆ ವ್ಯಕ್ತಿಯ ತನಗೆ ಸೂಚಿಸಿದ ಕೆಲಸವನ್ನಷ್ಟೇ ಮಾಡಬೇಕು. ಇದರ ಪರಿಣಾಮವಾಗಿ ಏನಾಗುತ್ತದೆಂದರೆ, ಅಲ್ಲಿ ಯಾರೊಬ್ಬರಿಗೂ ತಾವು ಮಾಡುತ್ತಿರುವ ಕೆಲಸದಲ್ಲಿ ಸಂತೋಷವೇ ಸಿಕ್ಕುತ್ತಿರುವುದಿಲ್ಲ. ಇಂತಹ ಆನಂದದ ಕೊರತೆಯು ಅಸಂತೋಷ ಮತ್ತು ಒತ್ತಡಗಳಿಗೆ ಕಾರಣವಾಗುತ್ತದೆ. ಇದು ಬಂಡವಾಳಶಾಹಿಯ ಲಕ್ಷಣಗಳಲ್ಲಿ ಒಂದಾಗಿದೆ.

ಶಾಲಾಕಾಲೇಜುಗಳು ಮತ್ತು ಉದ್ಯಮಸಂಸ್ಥೆಗಳಲ್ಲಿನ ಪರಕೀಯ ಭಾವನೆಯು ನಿತ್ಯಜೀವನದ ಭಾಗವೇ ಆಗಿದೆ. ತರಗತಿಯೊಳಗೆ ಬೋಧಿಸುತ್ತಿರುವ ವಿಷಯವು ವಿದ್ಯಾರ್ಥಿಗೆ ಸಂಬಂಧವೇ ಇಲ್ಲ ಎನಿಸತೊಡುಗುತ್ತದೆ ಏಕೆಂದರೆ ಶಿಕ್ಷಕರು ತುಂಬಾ ಅವಸರದಲ್ಲಿರುತ್ತಾರೆ ಮತ್ತು ಬೋಧಿಸಲ್ಪಡುತ್ತಿರುವ ವಿಷಯದ ಪ್ರಸ್ತುತೆಯ ಅರಿವಾಗದೆ ವಿದ್ಯಾರ್ಥಿಯು ಪರಕೀಯ ಭಾವನೆ ಅನುಭವಿಸುತ್ತಾನೆ. ಶಿಕ್ಷಕರಿಗೂ ವಿವಿಧ ಹಿನ್ನೆಲೆಯುಳ್ಳ ವಿದ್ಯಾರ್ಥಿಗಳೆಲ್ಲರನ್ನೂ ಜೊತೆಯಲ್ಲಿ ಕರದೊಯ್ಯಲು ನಿಧಾನಿಸುವುದು ಬಹು ಖರ್ಚುವೆಚ್ಚವನ್ನು ಬೇಡುವುದಾಗಿರುತ್ತದೆ. ಯಾವ ಸಮಾಜದಲ್ಲಿ ಅಥವಾ ಶಿಕ್ಷಣ ವ್ಯವಸ್ಥೆಯಲ್ಲಿ ಖರ್ಚುವೆಚ್ಚ ಮತ್ತು ದಕ್ಷತೆಗಳೇ ಪ್ರಧಾನಮೌಲ್ಯಗಳಾಗಿರುತ್ತವೋ ಆಗ ಪರಕೀಯತೆಯನ್ನು ಸುಲಭವಾಗಿ ಒಪ್ಪಿಕೊಳ್ಳಲಾಗುತ್ತದೆ. ಕನಿಷ್ಠಪಕ್ಷ ಆ ಶಾಲೆಯ ಮಟ್ಟಿಗೆ ಅಥವಾ ಸಮಾಜದ ಮಟ್ಟಿಗೆ ಪ್ರಭಾವಿಗಳಾದವರಾದರೂ ಇದನ್ನು ಒಪ್ಪಿಕೊಳ್ಳುತ್ತಾರೆ.

ಕೆಲಸಗಾರರಲ್ಲಿ ಪರಕೀಯತೆಯ ಪ್ರಜ್ಞೆ ಬಂದುಬಿಟ್ಟರೆ ಅದು ಎಷ್ಟೊಂದು ಹಾನಿಯನ್ನು ಉಂಟುಮಾಡುತ್ತದೆ ಎನ್ನುವುದನ್ನು ಕೆಲವು ಕಂಪನಿಗಳು ಈಗ ಅರ್ಥ ಮಾಡಿಕೊಳ್ಳಲು ಆರಂಭಿಸಿದ್ದು, ತಮ್ಮ ಲಾಭದ ಪ್ರಮಾಣವನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆ ಮಾಡಿಕೊಂಡಾದರೂ ತಮ್ಮ ಕಾರ್ಯವಿಧಾನವನ್ನು ಬದಲಿಸಿಕೊಳ್ಳಲು ಮನಸ್ಸು ಮಾಡಿವೆ. ಜೊತೆಗೆ, ಉದ್ಯೋಗಿಗಳಿಗೆ ಅವರು ಮಾಡುತ್ತಿರುವ ಕೆಲಸದ ಅರ್ಥವಾದರೂ ಏನು ಎನ್ನುವುದನ್ನು ತಿಳಿದುಕೊಳ್ಳುವಂತೆ ಮಾಡುತ್ತಿವೆ. ಶಾಲಾಶಿಕ್ಷಕರು ಕೂಡ ತಾವು ಆತುರಾತುರವಾಗಿ ಪಾಠ ಮಾಡಿ ಪಠ್ಯಕ್ರಮ ಮುಗಿಸುವ ಬದಲು ಹೆಚ್ಚು ಆಸಕ್ತಿದಾಯಕವಾಗಿ ಬೋಧನೆಯಲ್ಲಿ ತೊಡಗಿಸಿಕೊಳ್ಳಲು ಹೇಗೆ ಸಮಯ ಮತ್ತು ಅವಕಾಶವನ್ನು ಪಡೆಯುವುದು ಎಂದು ಇದೇ ಧಾಟಿಯಲ್ಲಿ ಆಲೋಚಿಸುತ್ತಿದ್ದಾರೆ.

ಈ ಪರಕೀಯ ಪ್ರಜ್ಞೆಯನ್ನು ಬಗೆಹರಿಸಲು ಇನ್ನೊಂದು ಸಮಾನಾಂತರವಾದ ಸಾಮಾಜಿಕ ರೂಢಿ ಇದೆ. ಇದ್ಯಾವುದೆಂದರೆ, ಸಂತೋಷಕೂಟಗಳ ಏರ್ಪಾಡು ಮತ್ತು ಗ್ರಾಹಕವಾದ. ಇಡೀ ವಾರ ಒತ್ತಡದಲ್ಲಿ ಮತ್ತು ಪರಕೀಯ ಭಾವನೆಯಲ್ಲಿ ಕೆಲಸ ಮಾಡಿ ದಣಿದಿರುವವರೆಲ್ಲರೂ ವಾರಾಂತ್ಯದಲ್ಲಿ ಬಗೆಬಗೆಯ ಚಟುವಟಿಕೆಗಳೊಂದಿಗೆ, ಮನೆಯಿಂದ ಆಚೆ ಯಾವುದಾದರೂ ಸ್ಥಳಕ್ಕೆ ಹೋಗುವುದರ ಮೂಲಕ ಮತ್ತು ಯಾವುದಾದರೂ ಸಂತೋಷ-ಸಂಭ್ರಮಗಳಲ್ಲಿ ಮುಳುಗುವ ಮೂಲಕ ಅದನ್ನು ಸರಿದೂಗಿಸಿಕೊಳ್ಳಲು ನೋಡುತ್ತಾರೆ. ಇದರ ಜೊತೆಗೆ ಜನರು

ವಿಪರೀತವಾದ ಖರೀದಿಯಲ್ಲೂ ತೃಪ್ತಿಯನ್ನು ಕಾಣತೊಡಗುತ್ತಾರೆ. ಏಕೆಂದರೆ, ಗ್ರಾಹಕ ಸಂಸ್ಕೃತಿಯು ಜಾಹೀರಾತುಗಳ ಮೂಲಕ ವಾಸ್ತವಕ್ಕಿಂತ ದೊಡ್ಡದಾದ ಬಿಂಬಗಳನ್ನು ಸೃಷ್ಟಿಸಿ, ಕಣ್ಕಟ್ಟನ್ನು ಹುಟ್ಟುಹಾಕುತ್ತದೆ. ಹೀಗಾಗಿ, ಜನರು ಆಗಿಂದಾಗ್ಗೆ ವಸ್ತುಗಳನ್ನು ಖರೀದಿಸುವ ಮೂಲಕ ತಮ್ಮ ಉದ್ಯೋಗವು ಸೃಷ್ಟಿಸುವ ಒತ್ತಡ ಮತ್ತು ವಿರೋಧಾಭಾಸಗಳಿಂದ ಒಂದಿಷ್ಟಾದರೂ ಸಮಾಧಾನ ಕಂಡುಕೊಳ್ಳುತ್ತಾರೆ. ಈ ಬಗೆಯ ಗ್ರಾಹಕವಾದ ಮತ್ತು ಉದ್ಯೋಗದಾತ ಸಂಸ್ಥೆಗಳಲ್ಲಿನ ಮಾನವ ಸಂಪನ್ಮೂಲ ನಿರ್ವಹಣೆ ವಿಭಾಗಗಳು ಚೆನ್ನಾಗಿ ಕೆಲಸ ಮಾಡಿದರೂ ಪರಕೀಯ ಪ್ರಜ್ಞೆಯ ವಿರೋಧಾಭಾಸ ಹಾಗೆಯೇ ಉಳಿದುಕೊಳ್ಳುತ್ತದೆ.

**ಶೋಷಣೆ**

ಬಂಡವಾಳಶಾಹಿ ಸಮಾಜದ ಮುಖ್ಯ ಲಕ್ಷಣವೂ ಇಲ್ಲಿ ಕಂಡುಬರುವ ಒತ್ತಡಗಳಿಗೆ ಮೂಲ ಕಾರಣ ಇಲ್ಲಿ ಪ್ರತಿಯೊಂದು ಸಂಬಂಧವೂ ಶೋಷಣೆಯನ್ನು ಆಧರಿಸಿರುವುದೇ ಆಗಿದೆ. ನಿಷ್ಠುರವಾಗಿ ಹೇಳುವುದಾದರೆ, ಬಂಡವಾಳಶಾಹಿಯೊಬ್ಬನು ಕಾರ್ಮಿಕರನ್ನು ಶೋಷಿಸುವ ಮೂಲಕವೇ ತನ್ನ ಲಾಭವನ್ನು ಹೆಚ್ಚಿಸಿಕೊಳ್ಳುತ್ತಿರುತ್ತಾನೆ. ಒಂದು ಉದಾಹರಣೆಯ ಮೂಲಕ, ಶೋಷಣೆಯ ಈ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳಬಹುದು.

ಒಂದು ಕಾರ್ಖಾನೆಯು ಮೊಬೈಲ್ ಫೋನನ್ನು ಉತ್ಪಾದಿಸುತ್ತಿದೆ ಎಂದಿಟ್ಟುಕೊಳ್ಳಿ. ಈ ಉತ್ಪನ್ನವನ್ನು ವಿನ್ಯಾಸಗೊಳಿಸಲು ಆ ಕಾರ್ಖಾನೆಯ ಮಾಲೀಕನು ಒಬ್ಬ ಎಂಜಿನಿಯರನ್ನು ನೇಮಿಸಿಕೊಳ್ಳಬಹುದು. ಅಂತಿಮವಾಗಿ ಈ ಉತ್ಪನ್ನ ಮಾರುಕಟ್ಟೆಗೆ ಬಂದಾಗ, ಮಾರುಕಟ್ಟೆಯಲ್ಲಿ ಅದನ್ನು 5,000 ರೂಪಾಯಿಗಳಿಗೆ ಮಾರಾಟ ಮಾಡುತ್ತಾರೆ ಎಂದುಕೊಳ್ಳೋಣ. ಇಲ್ಲಿ 'ಈ ಮೊಬೈಲ್ ನ ತಯಾರಿಕೆಯ ಹಿಂದೆ ಆ ಎಂಜಿನಿಯರ್ನ ಕೊಡುಗೆ ಎಷ್ಟಿದೆ ಮತ್ತು ಅವನಿಗೆ ಎಷ್ಟು ಸಂಬಳ ಕೊಡಬೇಕು?' ಎನ್ನುವ ಪ್ರಶ್ನೆ ಏಳುತ್ತದೆ. ಇಲ್ಲಿ ಕಂಪನಿಯ ಮಾಲೀಕನು ಆ ಎಂಜಿನಿಯರ್ ಗೆ ಕೊಡಬೇಕಾದುದನ್ನು ಕೊಟ್ಟು, ಮತ್ತು ತನ್ನ ಕಾರ್ಖಾನೆಯನ್ನು ನಡೆಸಲು ತಗುಲುವ ವಿದ್ಯುತ್ ವೆಚ್ಚ, ಬಾಡಿಗೆ ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಂಡು ಆ ಮೊಬೈಲ್‌ಗೆ ಒಂದು ಬೆಲೆಯನ್ನು ಇಟ್ಟಿರುತ್ತಾನೆ. ಇವೆಲ್ಲ ಬಾಬ್ತುಗಳಿಗೂ ಹೋಗುವ ಹಣವನ್ನು ಕಳೆದ ಮೇಲೆ ಉಳಿಯುವ ಮೊತ್ತ ಕಂಪನಿಯ ಮಾಲೀಕನಿಗೆ ಸಿಗುವ ಲಾಭಾಂಶವಾಗಿರುತ್ತದೆ. ಆದರೆ, ಬಂಡವಾಳಶಾಹಿ ವ್ಯವಸ್ಥೆಯ ಸಮಸ್ಯೆಯೇನೆಂದರೆ, ಈ ಮೊಬೈಲ್ ಸೆಟ್ ಅಂತಿಮ ರೂಪವನ್ನು ಪಡೆಯಲು ಆ ಎಂಜಿನಿಯರ್ ಸಾಕಷ್ಟು ಕೊಡುಗೆ ನೀಡಿದ್ದರೂ ಅದಕ್ಕೆ ತಕ್ಕಂತೇನೂ ಅವನಿಗೆ ವೇತನವನ್ನು ಕೊಡುವುದಿಲ್ಲ. ಬದಲಿಗೆ, ಮಾರುಕಟ್ಟೆಯಲ್ಲಿ ಎಂಜಿನಿಯರ್ಗಳಿಗಿರುವ ಬೇಡಿಕೆ ಮತ್ತು ಪೂರೈಕೆಯನ್ನು ಆಧರಿಸಿ ಅವನ ಸಂಬಳವನ್ನು ನಿರ್ಧರಿಸಲಾಗುತ್ತದೆ. ಅಂದರೆ, ಇದರ ಅರ್ಥವಿಷ್ಟೆ. ಮಾರುಕಟ್ಟೆಯಲ್ಲಿ ಎಂಜಿನಿಯರುಗಳು ಹೇರಳವಾಗಿದ್ದರೆ ಹೆಚ್ಚು ಸಂಬಳವನ್ನು ನಿರೀಕ್ಷಿಸುವ ಪ್ರಮೇಯವೇ ಬರುವುದಿಲ್ಲ. ಏಕೆಂದರೆ, ಒಬ್ಬನಲ್ಲದಿದ್ದರೆ ಇನ್ನೊಬ್ಬನು ಕಂಪನಿಗಳು ಕೊಡುವ ಕಡಿಮೆ ವೇತನಕ್ಕೇ ಕೆಲಸ ಮಾಡಲು ಒಪ್ಪಿಕೊಳ್ಳುತ್ತಾನೆ. ಒಂದು ವೇಳೆ, ಮಾರುಕಟ್ಟೆಯಲ್ಲಿ ಎಂಜಿನಿಯರುಗಳ ಸಂಖ್ಯೆ ಕಡಿಮೆ ಇದ್ದಿದ್ದೇ ಆದಲ್ಲಿ ಅವರಿಗೆ ಸಹಜವಾಗಿಯೇ ಹೆಚ್ಚು ವೇತನ ಸಿಗುತ್ತದೆ. ನಾವೀಗ ಇಲ್ಲಿ ಇನ್ನೊಂದು ಉದಾಹರಣೆಯನ್ನೂ ನೋಡಬಹುದು. ಆ ಕಾರ್ಖಾನೆಯಲ್ಲಿ ನಿಜಕ್ಕೂ ಮೊಬೈಲ್ ಫೋನಿನ ಬಿಡಿಭಾಗಗಳನ್ನು ಒಟ್ಟುಗೂಡಿಸಿ, ಅದನ್ನೆಲ್ಲ ಅಚ್ಚುಕಟ್ಟಾಗಿ ಜೋಡಿಸುವವನಿಗೆ ಏನು ಸಿಗುತ್ತದೆ? ಸಾಮಾನ್ಯವಾಗಿ ಇಂಥವರಿಗೆ ಸಿಗುವ ಸಂಬಳ ಎಷ್ಟೊಂದು ಕಡಿಮೆ ಇರುತ್ತದೆಂದರೆ, ಯಾವನಾದರೂ ಒಬ್ಬ ಹುಡುಗ ಹತ್ತನೇ ತರಗತಿಯ ನಂತರ ಒಂದೆರಡು ವರ್ಷ ತರಬೇತಿ ಪಡೆದುಕೊಂಡು ಯಾವುದಾದರೂ ಕೆಲಸ ಮಾಡುತ್ತಿದ್ದರೆ ಎಷ್ಟು

ದುಡಿಯುತ್ತಾನೋ ಅಷ್ಟೇ ಸಂಬಳ ಈತನಿಗೂ ಇರುತ್ತದೆ. ಇದು ಬಿಡಿಭಾಗಗಳನ್ನು ಜೋಡಿಸಿ, ಮೊಬೈಲ್‌ಗೊಂದು ಅಂತಿಮರೂಪ ಕೊಡುವವನಿಗೆ ಸಿಗುವ ವೇತನವನ್ನು ಅಳೆಯುವ ಸರಿಯಾದ ವಿಧಾನವೇನಲ್ಲ. ಆದರೆ, ಎಷ್ಟು ಜನ ಕೆಲಸಗಾರರು ತಮ್ಮ ಮಾಲೀಕರನ್ನು ಅಥವಾ ಬೇರೆ ಕಂಪನಿಯನ್ನು ಸಂಪರ್ಕಿಸಿ, ತಮಗೆ ಸರಿಯಾದ ಉದ್ಯೋಗವನ್ನು ಕೊಡಲು ಕೇಳುತ್ತಾರೆ ಹೇಳಿ? ಅಧಿಕಾರದ ಅಸಮತೋಲನವೇ ವೇತನವನ್ನು ನಿರ್ಧರಿಸುವ ಪ್ರಮುಖ ಅಂಶವಾಗಿರುವ ವಾತಾವರಣದಲ್ಲಿ ಕೆಲಸಕ್ಕೆ ತಕ್ಕ ವೇತನವನ್ನು ಪಡೆದುಕೊಳ್ಳುವುದು ನಿಜಕ್ಕೂ ಕಷ್ಟದ ಸಂಗತಿಯೇ ಆಗಿದೆ. ಶೋಷಣೆ ಮತ್ತು ವೇತನವನ್ನು ಒಮ್ಮುಖವಾಗಿ ನಿರ್ಧರಿಸುವುದೇ ಬಂಡವಾಳಶಾಹಿಯ ಗುಣಗಳಾಗಿವೆ. ಮಾರುಕಟ್ಟೆಯು ಕೆಲವು ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ಮಾತ್ರ ನ್ಯಾಯಯುತವಾಗಿರುತ್ತದೆಯೇ ವಿನಾ ಅದು ಎಲ್ಲ ಸಂದರ್ಭಗಳಲ್ಲೂ ಸರಿಯಾಗಿರುವುದಿಲ್ಲ.

ಶೋಷಣೆ ಎಂದರೆ, ಯಾವುದೇ ಒಬ್ಬ ವ್ಯಕ್ತಿಗೆ ತನ್ನ ಕೆಲಸಕ್ಕೆ ಸರಿಯಾಗಿ ಸಲ್ಲಬೇಕಾದುದಕ್ಕಿಂತ ಕಡಿಮೆ ಪ್ರತಿಫಲ ಸಿಗುವುದೇ ಆಗಿದೆ. ಇಲ್ಲಿ ಸಾಮಾನ್ಯವಾಗಿ ಉದ್ಯೋಗದಾತನದೇ ಮೇಲುಗೈಯಾಗಿದ್ದು, ಅವನು ಮಾರುಕಟ್ಟೆಯ ಸ್ಥಿತಿಗತಿಗಳನ್ನು ಆಧರಿಸಿ ಯಾವ ಉದ್ಯೋಗಿಗೆ ಎಷ್ಟು ವೇತನ ಕೊಡಬೇಕೆನ್ನುವುದನ್ನು –ಆದಷ್ಟೂ ಕಡಿಮೆ ವೇತನವನ್ನು- ತಾನೇ ತೀರ್ಮಾನಿಸುತ್ತಾನೆ. ಅದರಲ್ಲೂ ಕೌಶಲ್ಯದ ನೆರವಿಲ್ಲದಂತಹ ಕೆಲಸಗಾರರಿಗಂತೂ ಮಾಲೀಕರು ದಿನದ ಎರಡು ಊಟಕ್ಕೆಷ್ಟು ಬೇಕೋ ಅದಕ್ಕಿಂತ ನಾಲ್ಕು ಕಾಸನ್ನು ಜಾಸ್ತಿ ಕೊಡುತ್ತಾರಷ್ಟೆ. ತಮ್ಮ ಬದುಕಿನ ಬಂಡಿಯನ್ನು ಸಾಗಿಸಲು ಇಂಥ ಕೆಲಸಗಾರರು ಮಾರನೆ ದಿನ ಮತ್ತೆ ಅನಿವಾರ್ಯವಾಗಿ ಕೆಲಸಕ್ಕೆ ಬರಲೇಬೇಕು. ಸಾಮಾನ್ಯವಾಗಿ ವೇತನವನ್ನು ತೀರ್ಮಾನಿಸುವ ವಿಷಯದಲ್ಲಿ ಮಾಲೀಕರ ಕೈಯೇ ಮೇಲಾದಾಗ, ಉದ್ಯೋಗಿಗಳೆಲ್ಲರೂ ಒಗ್ಗಟ್ಟಿನಿಂದ ಮುನ್ನುಗ್ಗಿ, ಸಂಧಾನ ನಡೆಸಿ ಸಮತೋಲನವನ್ನು ಸಾಧಿಸುವುದು ಸಾಮಾನ್ಯವಾದ ಪದ್ಧತಿಯಾಗಿದೆ. ಹೆಚ್ಚಿನ ಅರಿವುಳ್ಳ ಉದ್ಯೋಗದಾತರು ತಮಗೆ ಶೋಷಣೆಯುಂಟಾಗುತ್ತಿದೆ ಎಂಬ ಕಾರ್ಮಿಕರ ಭಾವನೆಯಿಂದ ಸೃಷ್ಟಿಯಾಗುವ ಒತ್ತಡವನ್ನು ಮೀರಲು ಲಾಭಾಂಶದಲ್ಲಿ ಹಂಚಿಕೆ ಮತ್ತು ಪ್ರಮುಖ ತೀರ್ಮಾನಗಳನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಕಾರ್ಮಿಕರನ್ನೂ ಒಳಗೊಳ್ಳುವ ಉಪಾಯಗಳನ್ನು ಕಂಡುಕೊಂಡಿದ್ದಾರೆ. ಇಷ್ಟಾದರೂ ಕೈಗಾರಿಕಾ ವಲಯಗಳಲ್ಲಿ ಮತ್ತೆಮತ್ತೆ ಮುಷ್ಕರಗಳು ನಡೆಯುತ್ತಿದ್ದು, ಹಿಂಸಾಚಾರ ಕೂಡ ಸಂಭವಿಸುತ್ತಲೇ ಇದ್ದು ಇದು, ಬಂಡವಾಳಶಾಹಿ ವ್ಯವಸ್ಥೆಯಲ್ಲಿನ ವಿರೋಧಾಭಾಸವು ಪರಿಹರಿಸಲಾರದಷ್ಟು ಕಗ್ಗಂಟಾಗಿರುವುದನ್ನು ಹೇಳುತ್ತದಲ್ಲದೆ, ಈ ಪ್ರವೃತ್ತಿಯು ಕೆಲಸದ ವಿಧಾನವು ಹೇಗಿರಬೇಕು ಮತ್ತು ಈ ನಿಟ್ಟಿನಲ್ಲಿ ಬರಬೇಕಾದ ಬದಲಾವಣೆಗಳೇನು ಎನ್ನುವುದನ್ನು ನಿರ್ದೇಶಿಸುವಷ್ಟು ಶಕ್ತವಾಗಿದೆ.

**ಬದಲಾಗುತ್ತಿರುವ ಬಂಡವಾಳಶಾಹಿಯ ರೂಪಗಳು**

ಬಂಡವಾಳಶಾಹಿ ವ್ಯವಸ್ಥೆಯ ಒಡಲಿನಲ್ಲೇ ಇರುವ ವೈರುಧ್ಯಗಳು ನಿಧಾನವಾಗಿ ಆ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರುತ್ತಿವೆ. ಬಂಡವಾಳಶಾಹಿಯು ಶಾಶ್ವತವಾದ ವ್ಯವಸ್ಥೆಯಾಗಲಿ, ಜಡವಾದ ವ್ಯವಸ್ಥೆಯಾಗಲಿ ಅಲ್ಲ. ಚರಿತ್ರೆಯಲ್ಲಿ ಕ್ರಮೇಣವಾಗಿ ಮುಂಚೂಣಿಗೆ ಬಂದ ಈ ವ್ಯವಸ್ಥೆಯು ಒಂದೊಂದು ಕಾಲಘಟ್ಟದಲ್ಲಿ ಒಂದೊಂದು ರೂಪಗಳನ್ನು ಪಡೆಯುತ್ತ ಬಂದಿದೆ. ಇವುಗಳ ಪೈಕಿ ವ್ಯಾಪಾರ-ವಹಿವಾಟಿನ ಮೂಲಕ ಲಾಭವನ್ನು ಗಳಿಸುವ ಗುರಿಯನ್ನಿಟ್ಟುಕೊಂಡಿದ್ದ `ಮರ್ಕಂಟೈಲ್ ಕ್ಯಾಪಿಟಲಿಸಂ' (Mercantile Capitalism- ವ್ಯಾಪಾರ) ಕೂಡ ಒಂದು. ಬ್ರಿಟಿಷರು ಭಾರತದಲ್ಲಿ ನಡೆಸುತ್ತಿದ್ದ `ಈಸ್ಟ್ ಇಂಡಿಯಾ ಕಂಪನಿ' ಇದಕ್ಕೊಂದು ಅತ್ಯುತ್ತಮ ಉದಾಹರಣೆಯಾಗಿದೆ. ತನ್ನ ಪ್ರತಿಸ್ಪರ್ಧಿಗಳಾದ ಫ್ರೆಂಚರು ಮತ್ತು ಡಚ್ಚರು ಮುನ್ನೆಲೆಗೆ ಬರಲು ಬಿಡಬಾರದೆಂಬ ಉದ್ದೇಶದಿಂದ ಈಸ್ಟ್ ಇಂಡಿಯಾ ಕಂಪನಿಯು ಭಾರತದ ಹೆಚ್ಚುಹೆಚ್ಚು ಭೂಭಾಗಗಳನ್ನು ನಿಯಂತ್ರಿಸಲು ಮುಂದಾಯಿತಲ್ಲದೆ, ಭಾರತೀಯ ಉತ್ಪಾದಕರ

ಉತ್ಪನ್ನಗಳಿಗೆ ಒಳ್ಳೆಯ ಬೆಲೆಯನ್ನೂ ನೀಡತೊಡಗಿತು. ಆದರೆ, ಆನಂತರದಲ್ಲಿ ಅದು ಬ್ರಿಟಿಷ್ ಉತ್ಪಾದಕರ ಅಗತ್ಯಗಳಿಗೆ ತಕ್ಕಂತೆ ಭಾರತೀಯ ಮಾರುಕಟ್ಟೆ ಇರಬೇಕು ಮತ್ತು ಭಾರತೀಯರು ತಮ್ಮದೇ ಆದ ಕೈಗಾರಿಕೆಗಳನ್ನು ಸ್ಥಾಪಿಸಬಾರದೆಂಬ ಉದ್ದೇಶದಿಂದ ಇಡೀ ಭಾರತವನ್ನೇ ತನ್ನ ಕಪಿಮುಷ್ಠಿಯಲ್ಲಿ ಇಟ್ಟುಕೊಂಡಿತು.

ಬಂಡವಾಳಶಾಹಿಯ ಇನ್ನೊಂದು ರೂಪವೆಂದರೆ, 20ನೇ ಶತಮಾನದ ಆರಂಭದಲ್ಲಿ ಅಸ್ತಿತ್ವಕ್ಕೆ ಬಂದ `ಕೈಗಾರಿಕಾ ಬಂಡವಾಳಶಾಹಿ'ಯಾಗಿದೆ. ಸಾಮೂಹಿಕವಾಗಿ ಬೃಹತ್ ಪ್ರಮಾಣದ ಸರಕುಗಳ ಉತ್ಪಾದನೆ ಸಾಧ್ಯವಾಗುವಂತೆ ಇದು ಎಲ್ಲೆಡೆಗಳಲ್ಲೂ ಕೈಗಾರಿಕೆಗಳನ್ನು ಸ್ಥಾಪಿಸಿತು. ಆದರೆ, ಈಗಿನ ದಿನಮಾನವು ಬಂಡವಾಳಶಾಹಿಯು ಜಾಗತೀಕರಣಗೊಂಡ ಯುಗವಾಗಿದ್ದು, ಉತ್ಪಾದನಾ ಚಟುವಟಿಕೆಗಳು ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಂದ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಕಡೆಗೆ ಸಾಗಿದೆ. ಅಲ್ಲದೆ, ಈಗ ಹಿಂದಿನಂತೆ ಉತ್ಪಾದನಾ ಚಟುವಟಿಕೆಯ ಯಜಮಾನಿಕೆ ಇಲ್ಲಿ ಉಳಿದಿಲ್ಲ. ಬದಲಿಗೆ, ವ್ಯಾಪಾರ ವಹಿವಾಟು ಮತ್ತು ಸೇವೆಗಳೇ ಇಲ್ಲಿ ಮುಖ್ಯವಾಗಿದ್ದು, ಇವೇ ಲಾಭದ ಸೆಲೆಗಳಾಗಿವೆ.

ಇಷ್ಟಾದರೂ ಶೋಷಣೆಯೇ ಬಂಡವಾಳಶಾಹಿ ವ್ಯವಸ್ಥೆಯ ಪ್ರಧಾನ ಗುಣವಾಗಿದೆ. ಇನ್ನೊಂದೆಡೆಯಲ್ಲಿ, ಈ ವ್ಯವಸ್ಥೆಯು ಕೂಡ ಕಾಲಕ್ಕೆ ತಕ್ಕಂತೆ ಬದಲಾಗುತ್ತ ಬಂದಿದೆ. ನಿಜ ಹೇಳಬೇಕೆಂದರೆ, ಜಗತ್ತಿನಾದ್ಯಂತದ ಕಾರ್ಮಿಕ ಚಳವಳಿಗಳು, ಧಾರ್ಮಿಕ ಸಂಘಟನೆಗಳು ಮತ್ತು ಪರಿಸರದ ಪರ ವಕಾಲತ್ತು ಮಾಡುವ ಗುಂಪುಗಳೆಲ್ಲವೂ ಬಂಡವಾಳಶಾಹಿ ವ್ಯವಸ್ಥೆಯನ್ನು ವಿರೋಧಿಸುತ್ತಲೇ ಬಂದಿವೆ. ಇಂತಹ ಆಗ್ರಹಗಳು ಒಳ್ಳೆಯ ಫಲವನ್ನೂ ಕೊಟ್ಟಿವೆ. ಉದಾಹರಣೆಗೆ ಹೇಳುವುದಾದರೆ, ಎರಡನೇ ಮಹಾಯುದ್ಧದ ನಂತರದಿಂದ 1980ರ ದಶಕದವರೆಗೂ ಅಮೆರಿಕದಲ್ಲಿ ಕಂಪನಿಗಳ ಮಾಲೀಕರು ತಮಗೆ ಬರುವ ಲಾಭದಲ್ಲಿ ಹೆಚ್ಚಿನಂಶವನ್ನು ತಮ್ಮ ಉದ್ಯೋಗಿಗಳೊಂದಿಗೆ ಹಂಚಿಕೊಳ್ಳಬೇಕುವ ಪದ್ಧತಿಯೇ ಚಾಲ್ತಿಯಲ್ಲಿದ್ದುದು ಇದರ ಪರಿಣಾಮವೇ ಆಗಿದೆ. ಇದರ ಫಲವಾಗಿ ಅರೆಕುಶಲಿಗಳಾದ ಎಲೆಕ್ಟ್ರೀಷಿಯನ್ ಮತ್ತು ವೆಲ್ಡರ್‌ಗಳು ಕೂಡ ಸ್ವಂತ ಮನೆಯನ್ನು ಮಾಡಿಕೊಳ್ಳುವುದು ಮತ್ತು ಸ್ವಂತ ಕಾರನ್ನು ಇಟ್ಟುಕೊಳ್ಳುವಂತಹ ಒಳ್ಳೆಯ ವಾತಾವರಣ ಸೃಷ್ಟಿಯಾಯಿತು. ಇನ್ನೊಂದೆಡೆಯಲ್ಲಿ, ಬಂಡವಾಳಶಾಹಿ ವ್ಯವಸ್ಥೆಗೆ ಸಂಪೂರ್ಣ ತದ್ವಿರುದ್ಧವಾದ ಉತ್ಪಾದನೆ ಮತ್ತು ವಿನಿಮಯ ವಿಧಾನವನ್ನು ಅನುಸರಿಸಿದ ಸೋವಿಯತ್ ಒಕ್ಕೂಟ, ಕ್ಯೂಬಾ ಮತ್ತು ಚೀನಾ ಕೂಡ ಮುಂಚೂಣಿಗೆ ಬಂದವು. ಜೊತೆಗೆ, ಪರಸ್ಪರ ಕೊಡು-ಕೊಳ್ಳುವ ವಿಧಾನದ ಬಗ್ಗೆ ಈಗಲೂ ಮಾತುಗಳು ಕೇಳಿಬರುತ್ತಿರುವುದು ಕಾಣುತ್ತಿದೆ. ನಿರುದ್ಯೋಗ ಭತ್ಯೆ ಮತ್ತು ಉದ್ಯೋಗಿಗಳಿಗೆ ಕೈತುಂಬಾ ಸಂಬಳ ಕೊಡುವ ಮೂಲಕ ಬಂಡವಾಳಶಾಹಿ ವ್ಯವಸ್ಥೆಯು 20ನೇ ಶತಮಾನದಲ್ಲಿ ಕಾರ್ಮಿಕರೊಂದಿಗೆ ಅನೇಕ ದೇಶಗಳಲ್ಲಿ ರಾಜಿ ಮಾಡಿಕೊಂಡಿತು. ಪಶ್ಚಿಮ ಯೂರೋಪ್ ಮತ್ತು ಕೆನಡಾದಂತಹ ದೇಶಗಳಲ್ಲಿ ಎಲ್ಲ ಬಡವರ ವಸತಿ ಮತ್ತು ವೈದ್ಯಕೀಯ ಅಗತ್ಯಗಳ ನಿರ್ವಹಣೆಯನ್ನು ಸರಕಾರಗಳು ತಾವೇ ವಹಿಸಿಕೊಂಡು ಕಲ್ಯಾಣರಾಜ್ಯವನ್ನು ಸ್ಥಾಪಿಸಿದವು. ಬಡವರಿಗೆ ಶಾಲೆಗಳನ್ನು ಸ್ಥಾಪಿಸುವ ಸಲುವಾಗಿ ತಮ್ಮ ಮೇಲೆ ಹೇರಿದ ಭಾರೀ ತೆರಿಗೆಯನ್ನು ಕೆಲವಾದರೂ ದೊಡ್ಡದೊಡ್ಡ ಕಂಪನಿಗಳು ಒಪ್ಪಿಕೊಂಡಿದ್ದರ ಭಾಗಶಹ ಪರಿಣಾಮವಾಗಿ ಈ ದೇಶಗಳಲ್ಲಿ ಎಲ್ಲರಿಗೂ ಎಟುಕುವಂತಹ ಶಿಕ್ಷಣ ವ್ಯವಸ್ಥೆಯೊಂದು ಜಾರಿಗೆ ಬಂದಿತು. ಈ ದೇಶಗಳಲ್ಲಿ ಸರಕಾರಿ ಶಾಲೆಗಳು ಕೂಡ ಚೆನ್ನಾಗಿಯೇ ಇವೆಯಲ್ಲದೆ, ಅಲ್ಲೆಲ್ಲ ಹೆಚ್ಚಿನವರು ತಮ್ಮ ಮಕ್ಕಳನ್ನು ಈ ಶಾಲೆಗಳಿಗೇ ಕಳುಹಿಸುತ್ತಾರೆ. ಬಂಡವಾಳಶಾಹಿ ವ್ಯವಸ್ಥೆ, ಸರಕಾರಗಳು ಮತ್ತು ನಾನಾ ಸಂಘಟನೆಗಳ ನಡುವೆ ರಾಜಿ ಸಂಧಾನಗಳು ಆಧುನಿಕ ಶಿಕ್ಷಣ ವ್ಯವಸ್ಥೆಯನ್ನು ರೂಪಿಸುವಲ್ಲಿ ಅನೇಕ ವಿಧಗಳಲ್ಲಿ ಪ್ರಭಾವ ಬೀರಿವೆ. ನಾವೀಗ ಭಾರತದಲ್ಲಿ ಗುಣಮಟ್ಟದ ಶಿಕ್ಷಣದ ಸಾರ್ವತ್ರೀಕರಣಕ್ಕೆ ಆಗ್ರಹಿಸುತ್ತಿದ್ದೇವೆ.

ಇದು ಹೆಚ್ಚು ಲಾಭವನ್ನು ಮಾಡಿಕೊಳ್ಳುತ್ತಲೇ ಸಾಗುವ ಬಂಡವಾಳಶಾಹಿ ವ್ಯವಸ್ಥೆಯ ಅಡ್ಡ ಉದ್ದೇಶಗಳಲ್ಲಿ ಒಂದಾಗಿದೆ ಎಂಬುದನ್ನು ನಾವು ಇಲ್ಲಿ ನೆನಪಿಸಿಕೊಳ್ಳಬೇಕು.

**ಪ್ರಭುತ್ವ, ಬಂಡವಾಳಶಾಹಿ ಮತ್ತು ಭಾರತದಲ್ಲಿ ಶಿಕ್ಷಣ**

ಜಗತ್ತಿನ ಎಲ್ಲೆಡೆಗಳಲ್ಲೂ ಕಳೆದ ಶತಮಾನದುದ್ದಕ್ಕೂ ನಡೆದಂತೆಯೇ ಭಾರತದಲ್ಲೂ ಸಹ ಬಂಡವಾಳಶಾಹಿ ವ್ಯವಸ್ಥೆಯನ್ನು ನಿಯಂತ್ರಿಸಬೇಕೆಂದು ನಂಬಲಾಗಿತ್ತು. ಮಾರುಕಟ್ಟೆ ಮತ್ತು ಉದ್ಯಮ ಸಂಸ್ಥೆಗಳ ಅಗತ್ಯಗಳಿಗಿಂತ ಹೆಚ್ಚಾಗಿ ಸಮಾಜದ ಅಗತ್ಯಗಳೇ ಪ್ರಮುಖವಾಗಬೇಕು ಮತ್ತು ಜನರ ಪಾಲಿಗೆ ಸಮಾಜವು ಉತ್ತರದಾಯಿಯಾಗಿರಬೇಕೇ ವಿನಾ ಯಾರೋ ಕೆಲವು ಶ್ರೀಮಂತರು ಮಾತ್ರವಲ್ಲ ಎನ್ನುವ ತರ್ಕ ಇದರ ಹಿಂದಿತ್ತು. ಅಂದರೆ, ಎಲ್ಲ ದೇಶಗಳಲ್ಲೂ ಪ್ರಜಾಸತ್ತಾತ್ಮಕವಾಗಿ ಚುನಾಯಿತವಾದ ಪ್ರಭುತ್ವವೇ ಜನರಿಗೆ ಉತ್ತರದಾಯಿಯಾಗಿರಬೇಕು ಎನ್ನುವುದು ಇದರ ಹಿಂದಿನ ಆಶಯವಾಗಿತ್ತು. ಅಮೆರಿಕ, ಯುನೈಟೆಡ್ ಕಿಂಗ್‌ಡಮ್ ಮತ್ತು ಫ್ರಾನ್ಸ್‌ನಲ್ಲಿರುವಂತೆ ನಮ್ಮಲ್ಲೂ ಸಹ ಸಂಪನ್ಮೂಲಗಳನ್ನು ಹೇಗೆ ಹಂಚಬೇಕು, ಯಾವ ಮೌಲ್ಯಗಳನ್ನು ನಾವು ಉತ್ತೇಜಿಸಬೇಕು ಎನ್ನುವ ವಿಚಾರಗಳಲ್ಲಿ ಸಮಾಜದ ಮಾತು ಅಂತಿಮವಾಗಿದೆಯೇ ಹೊರತು ಕೇವಲ ಮಾರುಕಟ್ಟೆಯೊಂದೇ ಇಲ್ಲಿ ನಿರ್ಣಾಯಕ ಶಕ್ತಿಯಾಗಿಲ್ಲ. ಬಹುದೀರ್ಘ ಕಾಲದಿಂದಲೂ ನಮ್ಮಲ್ಲಿ ಇದು ನಡೆದುಕೊಂಡು ಬರುತ್ತಿದೆ. ಇಲ್ಲಿ ಸಮಾಜ, ಸರಕಾರ ಮತ್ತು ಮಾರುಕಟ್ಟೆಗಳ ನಡುವಿನ ಸಮತೋಲನವು ಬೇರೆಬೇರೆ ರೂಪಗಳನ್ನು ತೆಗೆದುಕೊಳ್ಳಬಹುದು. ಬ್ರಿಟಿಷರ ಬಿಗಿಹಿಡಿತದಿಂದ ಹೊರಬಂದು, ದೇಶವು ಸ್ವಾತಂತ್ರ್ಯವನ್ನು ಗಳಿಸಿದ ಕೂಡಲೇ ಭಾರತದ ಬೆಳವಣಿಗೆಗೆ ಸಂಬಂಧಿಸಿದಂತೆ ಸಮಾಜವು ಮುಖ್ಯ ಪಾತ್ರವನ್ನು ನಿರ್ವಹಿಸತೊಡಗಿತು. ಆ ಸಮಯದಲ್ಲಿ ಜನರಿಗೆ ಏನು ಬೇಕು, ಅದರಲ್ಲೂ ದೇಶದಲ್ಲಿ ಅಪಾರ ಸಂಖ್ಯೆಯಲ್ಲಿದ್ದ ಬಡವರ ಅಗತ್ಯಗಳೇನು ಎನ್ನುವುದು ಖಾಸಗಿ ಕಂಪನಿಗಳಿಗೆ ಗೊತ್ತಾಗುವುದಿಲ್ಲ ಎಂಬ ತೀರ್ಮಾನಕ್ಕೆ ಬರಲಾಯಿತು.

1950ರ ದಶಕದಲ್ಲಿ ನಮ್ಮ ಪ್ರಜಾಸತ್ತೆಯನ್ನು ಮೇಲ್ಜಾತಿಯ ಮತ್ತು ಮೇಲ್ವರ್ಗದ ಬೆರಳೆಣಿಕೆಯಷ್ಟು ಜನರಷ್ಟೆ ನಿಯಂತ್ರಿಸುತ್ತಿದ್ದರು. ವಾಸ್ತವವಾಗಿ ದೇಶದ ಸ್ವಾತಂತ್ರ್ಯ ಚಳವಳಿಯು ತನ್ನ ಹೋರಾಟದಲ್ಲಿ ಸಣ್ಣರೈತರು ಮತ್ತು ಕೆಲಸಗಾರರೇ ಮುಖ್ಯವಾಗಿರುವಂತೆ ಒತ್ತು ನೀಡಿತ್ತು. ಈ ಮೂಲಕ ಅದು, ಈ ಆಂದೋಲನದಲ್ಲಿ ಸಾಮಾನ್ಯ ಭಾರತೀಯನೇ ಕೇಂದ್ರಬಿಂದುವಾಗಿರುವಂತೆ ನೋಡಿಕೊಂಡಿತ್ತು. ಆದರೆ, ಯಾವುದೇ ತೀರ್ಮಾನಗಳನ್ನು ತೆಗೆದುಕೊಳ್ಳುವಲ್ಲಿ ಇವರ ಪಾತ್ರವು ತುಂಬಾ ಚಿಕ್ಕದಾಗಿತ್ತು. ಆ ದಿನಗಳಲ್ಲಿ ಕೂಡ ದೊಡ್ಡ ಭೂ ಮಾಲೀಕರು, ದೊಡ್ಡದೊಡ್ಡ ಕಂಪನಿಗಳು ಮತ್ತು ಸ್ವತಹ ಸರಕಾರ ತುಂಬಾ ಪ್ರಭಾವಶಾಲಿಯಾಗಿದ್ದವು. ಜವಾಹರಲಾಲ್ ನೆಹರು ಅವರ ಸರಕಾರದ ಅವಿಭಾಜ್ಯ ಅಂಗದಂತಿದ್ದ ವಿದ್ವಾಂಸರ ಗುಂಪೊಂದು, ಭಾರತದ ಸಮಸ್ಯೆಗಳಿಗೆ ಬಂಡವಾಳಶಾಹಿ ವ್ಯವಸ್ಥೆಯು ಯಾವುದೇ ಪರಿಹಾರವನ್ನು ಒದಗಿಸದು ಎಂದು ನಂಬಿತ್ತು. ಹೀಗಾಗಿ, ಸ್ವತಃ ಸರಕಾರವೇ ಅಭಿವೃದ್ಧಿ ಯೋಜನೆಗಳನ್ನು ಕೈಗೆತ್ತಿಕೊಂಡಿತಲ್ಲದೆ, ಕೈಗಾರಿಕೆ ಮತ್ತು ಮೂಲಭೂತ ಸೌಲಭ್ಯಗಳ ಯೋಜನೆಗಳಿಗೆ ಉತ್ತೇಜನ ನೀಡಿತು. ಅಲ್ಲದೆ, ಸರಕಾರ ಸ್ವತಃ ಉದ್ಯೋಗದಾತ ಸಂಸ್ಥೆಯಾಗುವ ಮೂಲಕ, ಉದ್ಯೋಗಿಗಳಿಗೆ ಒಳ್ಳೆಯ ವೇತನ ಮತ್ತು ಭತ್ಯೆಗಳನ್ನು ನೀಡತೊಡಗಿತು. ಬಂಡವಾಳಶಾಹಿಗಳಿಗೆ ಇದನ್ನೆಲ್ಲ ತಾವೂ ಕೂಡ ಅನುಸರಿಸುವಂತೆ ಒತ್ತಡ ಸೃಷ್ಟಿಯಾಯಿತು. ಸ್ವಾತಂತ್ರ್ಯವನ್ನು ಗಳಿಸಿದ ಆರಂಭದ ದಿನಗಳಲ್ಲಿ ಸರಕಾರವು ಕ್ಷಿಪ್ರಗತಿಯಲ್ಲಿ ದೇಶದ ಎಲ್ಲೆಡೆಗಳಲ್ಲೂ ಶಾಲೆಗಳನ್ನು ತೆರೆಯತೊಡಗಿತು. ಆದರೆ, 1962ರಲ್ಲಿ ಸಂಭವಿಸಿದ ಭಾರತ-

ಚೀನಾ ಯುದ್ಧದಿಂದ ಇದಕ್ಕೆ ಒಂದು ಹಂತದವರೆಗೆ ಅಡಚಣೆಯಾಯಿತು. ಆ ದಿನಗಳಲ್ಲಿ ಸರಕಾರಿ ಶಾಲೆಗಳ ಶಿಕ್ಷಕರಿಗೆ ಗೌರವಾರ್ಹವಾದ ವೇತನವನ್ನು ಕೊಡಲಾಗುತ್ತಿತ್ತಲ್ಲದೆ, ಈ ಶಿಕ್ಷಕರನ್ನು ಕಂಡು ಖಾಸಗಿ ಶಾಲೆಗಳಲ್ಲಿ ಪಾಠ ಮಾಡುತ್ತಿದ್ದವರು ಕರುಬುತ್ತಿದ್ದರು.

ಆದರೆ, `ಲೈಸೆನ್ಸ್ ರಾಜ್' ಎಂದು ಹೆಸರಾಗಿದ್ದ 1970ರ ದಶಕದಲ್ಲಿ ಸರಕಾರಿ ಸಂಸ್ಥೆಗಳಲ್ಲಿನ ಸಮಸ್ಯೆಗಳು ಬೆಳಕಿಗೆ ಬಂದವು. ಅಂದರೆ, ಹೆಚ್ಚಿನ ಸರಕಾರಿ ಉದ್ಯೋಗಿಗಳು ಜನರ ಸೇವೆ ಮಾಡುವುದನ್ನು ಮರೆತು, ಸ್ವಹಿತಾಸಕ್ತಿಗಳನ್ನು ಬೆಳೆಸಿಕೊಂಡರು. ಈ ಮೂಲಕ ಅವರೆಲ್ಲರೂ ತಮ್ಮ ಸ್ಥಾನಗಳನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದರು. ಆದರೆ, ನಮ್ಮ ಪ್ರಜಾಸತ್ತೆಯನ್ನು ಬಲಶಾಲಿಗಳಾದ ಕೆಲವೇ ಕೆಲವು ಮಂದಿ ನಿಯಂತ್ರಿಸುತ್ತಿದ್ದುದರ ಪರಿಣಾಮವಾಗಿ ಏನಾಯಿತೆಂದರೆ, ಸರಕಾರಿ ಉದ್ಯೋಗಿಗಳು ತಮ್ಮ ಕೆಲಸವನ್ನು ಸರಿಯಾಗಿ ಮಾಡುವಂತೆ ಸರಕಾರದ ಮೇಲೆ ಒತ್ತಡ ಹೇರಲು ಜನರು ಅಸಮರ್ಥರಾಗಿದ್ದರು.

ಇಂಥ ಪರಿಸ್ಥಿತಿಯಲ್ಲಿ ಕೆಲವರು ಮತ್ತೊಮ್ಮೆ ಮಾರುಕಟ್ಟೆ ಆಧಾರಿತ ಆರ್ಥಿಕತೆ ಮತ್ತು ಬಂಡವಾಳಶಾಹಿಯ ಪರವಾಗಿ ಮಾತನಾಡತೊಡಗಿದ್ದಾರೆ. ಅಂದರೆ, ಸಹಕಾರ ಮತ್ತು ಸೇವಾ ಮನೋಭಾವನೆಗಳಿಗೆ ಬದಲಾಗಿ ಲಾಭವೇ ಮುಖ್ಯ ಗುರಿಯಾಗಿದ್ದಾಗ ವ್ಯಕ್ತಿಗಳು ತುಂಬಾ ದಕ್ಷತೆಯಿಂದ ಕೆಲಸ ಮಾಡುತ್ತಾರೆ ಎಂದು ಪ್ರತಿಪಾದಿಸಲಾಗುತ್ತಿದೆ. ಇದಕ್ಕೆ ತಕ್ಕಂತೆ, ರೋಗಗ್ರಸ್ತವಾಗಿರುವ ಸರಕಾರಿ ಉದ್ದಿಮೆಗಳು ಸರಿಯಾಗಿ ಕೆಲಸ ಮಾಡಬೇಕೆಂದರೆ ಅವುಗಳನ್ನು ಖಾಸಗೀಕರಿಸುವುದೇ ಸರಿಯಾದ ದಾರಿ ಎಂದು ವಾದಿಸಲಾಗುತ್ತಿದೆ. ಶಿಕ್ಷಣ ಸಂಸ್ಥೆಗಳ ಖಾಸಗೀಕರಣಕ್ಕೆ ಹಾಗೂ ಭಾರತದಲ್ಲಿ ವರ್ಧಿಸುತ್ತಿರುವ ಔದ್ಯಮಿಕ ಶಕ್ತಿಗಳನ್ನು ಸ್ವೀಕರಿಸುವುದಕ್ಕೆ ಇದೇ ಕಾರಣವನ್ನು ಮುಂದೊಡ್ಡಲಾಗುತ್ತಿದೆ. ಪ್ರಾಯಶಃ ಈ ಹಂತದಲ್ಲಿ ದೇಶವು ಬಂಡವಾಳಶಾಹಿಯತ್ತ ವಾಲುತ್ತಿದೆಯಲ್ಲದೆ, ಕೆಲವೇ ಮಂದಿಗೆ ಮಾತ್ರ ಅನುಕೂಲವಾಗುವಂಥ ಆರ್ಥಿಕ ವ್ಯವಸ್ಥೆಯನ್ನು ಸೃಷ್ಟಿಸುತ್ತಿದೆ. ಇದರಿಂದಾಗಿ, ಇಡೀ ದೇಶದಲ್ಲಿ ಯಾವುದೇ ತೀರ್ಮಾನಗಳನ್ನು ಕೈಗೊಳ್ಳುವ ಹಂತದಲ್ಲಿ ಈ ಶಕ್ತಿಗಳದೇ ಮೇಲುಗೈಯಾಗಿದೆ. ಹಿಂದಿನ ಸರಕಾರದ ಅವಧಿಯಲ್ಲೇ ಇದು ಢಾಳಾಗಿ ಕಾಣುತ್ತಿತ್ತು. ಈಗಿನ ಸರಕಾರದಲ್ಲಂತೂ ಇದು ಮತ್ತಷ್ಟು ಜಾಸ್ತಿಯಾಗಿದೆ.

ನಮ್ಮ ದೇಶ ಮತ್ತು ಇಡೀ ಜಗತ್ತು ಯಾವ ದಿಕ್ಕಿನಲ್ಲಿ ಹೆಜ್ಜೆ ಇಡುತ್ತಿದೆ ಎನ್ನುವುದನ್ನು ಊಹಿಸುವುದು ನಿಜಕ್ಕೂ ಅಸಾಧ್ಯದ ಸಂಗತಿ. ಕಾರ್ಲ್ ಮಾರ್ಕ್ಸ್, ಜಗತ್ತು ಹೇಗೆ ಸಾಗುತ್ತದೆ ಎನ್ನುವ ಬಗ್ಗೆ ಕೆಲವು ಊಹೆಗಳನ್ನು ಮಾಡಲು ಪ್ರಯತ್ನಿಸಿದ್ದುಂಟು. ಆದರೆ, ಆತ ನುಡಿದ ಹಲವು ಭವಿಷ್ಯಗಳು ಸುಳ್ಳಾದವು. ಆದರೂ ಸಂಪೂರ್ಣ ಬಂಡವಾಳಶಾಹಿ ವ್ಯವಸ್ಥೆಯೊಂದು ಹುಟ್ಟುಹಾಕುವ ಕೆಲವು ಸಮಸ್ಯೆಗಳನ್ನು ಸುಲಭವಾಗಿ ವಿವರಿಸಬಹುದು. ಅವೆಂದರೆ- ಔದ್ಯಮಿಕ ಸಂಸ್ಥೆಗಳು (ಕಂಪನಿಗಳು) ಮತ್ತು ಅವುಗಳ ಮಾಲೀಕರು ಹಾಗೂ ಅಲ್ಲಿನ ಹಿರಿಯ ಮ್ಯಾನೇಜರ್ಗಳೇ ಈ ದೇಶದಲ್ಲಿ ಅತ್ಯಂತ ಶಕ್ತಿಶಾಲಿಗಳಾಗಬಹುದು, ಶಿಕ್ಷಣವೆಂದರೆ ಕಂಪನಿಗಳಿಗೆ ಬೇಕಾದ ಉದ್ಯೋಗಿಗಳನ್ನು ತಯಾರಿಸುವುದಷ್ಟೇ ವಿನಾ ಸ್ವತಂತ್ರ ಮನಸ್ಥಿತಿಯ ಜನರನ್ನು ಸಿದ್ಧಪಡಿಸುವುದಲ್ಲ, ಸಾಮಾನ್ಯ ಜನರಿಗೆ ಏನೋ ಕಾಟಾಚಾರಕ್ಕೆ ನಾಲ್ಕು ಅಕ್ಷರ ಕಲಿಸಿ ಉದ್ಯಮ ಸಂಸ್ಥೆಗಳ ಅಗತ್ಯಗಳನ್ನು ಪೂರೈಸಲು ಯಾರು ಅಗತ್ಯವೆನಿಸುತ್ತಾರೋ ಅಂಥವರಿಗೆ ಮಾತ್ರ ಉನ್ನತ ಶಿಕ್ಷಣ ಕೊಡಬೇಕು ಇತ್ಯಾದಿ ಇತ್ಯಾದಿ. ಇವು ಬಂಡವಾಳಶಾಹಿಯ ಹಿಂದಿರುವ ತರ್ಕವಾಗಿದೆ. ಇದು ಕನಿಷ್ಠ ಖರ್ಚು ಹಾಗೂ ಗರಿಷ್ಠ ಲಾಭದ ಸೂತ್ರವಾಗಿದೆ. ಆದರೆ, ಒಂದು ಸಮಾಜದಲ್ಲಿ ಬೇರೆ ಬಗೆಯ ತರ್ಕಗಳೂ ಇರುತ್ತವೆ. ಉದಾಹರಣೆಗೆ ಹೇಳುವುದಾದರೆ, ಪರಿಣಾಮಕಾರಿಯಾದ ಪ್ರಜಾಸತ್ತಾತ್ಮಕ ವ್ಯವಸ್ಥೆಯೊಂದು ಕೇವಲ ಶ್ರೀಮಂತರಿಗೆ ಮಾತ್ರವಲ್ಲದೆ ಪ್ರತಿಯೊಬ್ಬ ನಾಗರಿಕರಿಗೂ ಸಮಾನವಾದ ಗೌರವವನ್ನು ಕೊಡಬೇಕೆಂಬ ವಾತಾವರಣವನ್ನು ನಿರ್ಮಿಸಬಲ್ಲದು. ಹಾಗೆಯೇ, ಲಾಭವನ್ನು ಅಷ್ಟಾಗಿ ನಂಬದ ಸಾಂಸ್ಕೃತಿಕ ನಂಬಿಕೆಗಳು ದುಬಾರಿಯದಾದರೂ

ಸರಿಯೇ, ನೈತಿಕವಾಗಿ ಸರಿಯಾದ ಕೆಲವು ಕೆಲಸಗಳನ್ನು ಸರಕಾರ ಮಾಡಲೇಬೇಕೆಂಬ ಒತ್ತಡವನ್ನು ಸೃಷ್ಟಿಸಬಹುದು. ಜೊತೆಗೆ, ಮನುಷ್ಯನೊಬ್ಬನ ಪರಿಪೂರ್ಣ ಬೆಳವಣಿಗೆಗೆ ಜ್ಞಾನ ಮತ್ತು ಸ್ವಾತಂತ್ರ್ಯಗಳು –ಇದರಿಂದ ತೆರಿಗೆ ದುಬಾರಿಯಾದರೂ ಮತ್ತು ಶ್ರೀಮಂತರ ಲಾಭ ಇಳಿಕೆಯಾದರೂ ಸಹ- ಈಗಲೂ ಅತ್ಯಗತ್ಯ ಎಂದು ವಾದಿಸಲು ಸಾಧ್ಯವಿದೆ.

ಭಾರತದ ಬಂಡವಾಳಶಾಹಿ ವ್ಯವಸ್ಥೆಯು ಕಡಿಮೆ ಉತ್ಪಾದಕತೆ ಅಥವಾ ಊಳಿಗಮಾನ್ಯ ವ್ಯವಸ್ಥೆಗೆ ಜನರನ್ನು ಕಟ್ಟಿಹಾಕಿದ್ದ ಹಳೆಯ ಸ್ವರೂಪದ ಸಂಬಂಧಗಳನ್ನು ಕಿತ್ತೊಗೆದು ಹಲವು ಬಗೆಯ ಸ್ವಾತಂತ್ರ್ಯಗಳನ್ನು ದಯಪಾಲಿಸಿದೆ. ಆದರೆ, ಇನ್ನೊಂದೆಡೆ ಇದು ಹೊಸ ಬಗೆಯ ಗುಲಾಮಗಿರಿ ಮತ್ತು ಅಮಾನವೀಯತೆಯನ್ನೂ ಸೃಷ್ಟಿಸಬಲ್ಲದು. ಇದೇನೇ ಇರಲಿ, ಈ ಜಗತ್ತಿನಲ್ಲಿ ಹಲವು ಧ್ವನಿಗಳಿವೆ ಎನ್ನುವುದು ಸತ್ಯ. ನಾವು ಕ್ರಮೇಣ ಎಲ್ಲಿಗೆ ಹೋಗುತ್ತೇವೆ ಮತ್ತು ಮುಂದೊಂದು ದಿನ ಯಾವ ಬಗೆಯ ಬಂಡವಾಳಶಾಹಿ ಬರುತ್ತದೋ ಬಲ್ಲವರಾರು? ಅಥವಾ ಇವೆಲ್ಲಕ್ಕಿಂತಲೂ ಸಂಪೂರ್ಣ ಬೇರೆಯದೇ ಆದ ಇನ್ನೊಂದು ವ್ಯವಸ್ಥೆ ಬಂದರೂ ಬಂದೀತು. ಒಟ್ಟಿನಲ್ಲಿ, ಈ ಎಲ್ಲ ಪರಿವರ್ತನೆಗಳು ಹಾಗೂ ಪಲ್ಲಟಗಳು ಸೃಷ್ಟಿಸಿರುವ ಪ್ರಶ್ನೆಗಳಿಗೆ ಭಾರತ ಮತ್ತು ಜಗತ್ತಿನ ಉಳಿದೆಲ್ಲ ಭಾಗಗಳ ಶಿಕ್ಷಣ ತಜ್ಞರೆಲ್ಲರೂ ಉತ್ತರಿಸಲು ಪ್ರಯತ್ನಿಸುತ್ತಿರಲೇ ಇರಬೇಕಾಗುತ್ತದೆ.

***